ಉಪನ್ಯಾಸ
ಗ್ರಂಥಮಾಲೆ

೧೮೪

# ನಮ್ಮ ಅರಣ್ಯಗಳು

ಟಿ. ಎಂ. ಪಂಡಿತ
ಬಿ.ಎ. (ಆನರ್ಸ), ಎಂ. ಕಾಂ.



ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೭೪

ಉಪನ್ಯಾಸ ಗ್ರಂಥಮಾಲೆ

೧೮೪

# ನಮ್ಮ ಅರಣ್ಯಗಳು

ಟಿ. ಎಂ. ಪಂಡಿತ, ಬಿ.ಎ. (ಆನರ್ಸ), ಎಂ. ಕಾಂ.






ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಮಾರ್ಚ, ೧೯೭೪

ಪ್ರಕಾಶಕರು :

**ಎಸ್. ಎಸ್. ಒಡೆಯರ,** ಎಂ. ಎ., ಎಲ್‌ಎಲ್. ಬಿ.
ರಜಿಸ್ಟ್ರಾರ್,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ಮಾರ್ಚ, ೧೯೭೪
೫,೦೦೦ ಪ್ರತಿಗಳು



ಬೆಲೆ : ೨೫ ಪೈಸೆ

ಮುದ್ರಕರು :

**ಸದಾನಂದ ಎಸ್. ಪವಾರ**
ಸದಾನಂದ ಪ್ರಿಂಟರ್ಸ, ಮಾರ್ಕೆಟ್,
ಧಾರವಾಡ-೧

# ಮುನ್ನುಡಿ

*****

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗವಿಸ್ತರಣ ಹಾಗೂ ಪ್ರಕಟನ ಶಾಖೆಯ ಮುಖಾಂತರ ಕೈಕೊಂಡು ನಡೆ ಸುತ್ತಿರುವ ಜ್ಞಾನ ಪ್ರಸಾರ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರು ವದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರ ಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧ ಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯಕ್ಕೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾ ಲಯದ ಜ್ಞಾನಭಾಂಡಾರದ ಅಲ್ಪಾಂಶವನ್ನಾದರೂ ಮಹಾ ಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಉಪನ್ಯಾಸಮಾಲೆ ಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿ ಕೊಳ್ಳುತ್ತಿರುವದು ನಿಜವಾಗಿಯೂ ಸಂತೋಷದ ಸಂಗತಿ ಯಾಗಿದೆ.

ಯೌಗಿಕ ಕ್ರಮದಲ್ಲಿ ಏರುತ್ತಿರುವ ಜನಸಂಖ್ಯೆ, ದನಗಳ ಸಂಖ್ಯೆ, ವ್ಯವಸಾಯೋದ್ಯಮದ ವಿಸ್ತರಣೆ, ವೃದ್ಧಿಸುತ್ತಿರುವ ವನ್ಯೋತ್ಪತ್ತಿಗಳ ಬೇಡಿಕೆ ಮುಂತಾದ ಬೃಹತ್ ಸಮಸ್ಯೆಗಳ ನ್ನೆದುರಿಸುತ್ತಿರುವ ಇಂದಿನ ಪೀಳಿಗೆ ಅರಣ್ಯೋಚ್ಚಾಟನೆಯಲ್ಲಿ ತೊಡಗಿರುವದೇನೂ ಅಸಂಭವವಲ್ಲ. ತಿಳಿದೋ ತಿಳಿಯದೆಯೋ ಅರಣ್ಯಗಳನ್ನು ಹಾಳು ಮಾಡಿದ ಅನೇಕ ದೇಶಗಳು ಇಂದು ಹಾಳು ದೇಶಗಳಾಗಿ ಮರಳುಗಾಡುಗಳಾಗಿರುವ ನಿದರ್ಶನಗಳು ಹಲವಿವೆ ಎಂಬುದನ್ನು ಭೌಗೋಲಿಕ ಪುಟಗಳು ಮರೆಮಾಚ ಲಾರವು. ಕ್ಷೀಣಿಸುತ್ತಿರುವ ನಮ್ಮ ಅರಣ್ಯ ಸಂಪತ್ತನ್ನು ಲಕ್ಷಿಸಿ ಜನಸಾಮಾನ್ಯರಿಗೆ ದೇಶದ ಅರಣ್ಯಗಳ ನಿಷ್ಕೃಷ್ಟ ಪರಿಚಯ ಮಾಡಿಕೊಟ್ಟು, ವನಶ್ರೀ ಹಾಗೂ ವನಶ್ರೀ ವರ್ಧನೆಯ ಪ್ರಾಮುಖ್ಯತೆಯನ್ನು ಅತ್ಯಂತ ಪರಿಮಿತ ವ್ಯಾಪ್ತಿ ಯಲ್ಲಿ ಜಾಗೃತ ಏಕದೃಷ್ಟಿಗೆ ಒದಗುವಂತೆ ಮುಖ್ಯಾಂಶಗಳನ್ನು ತಿಳಿಸಿಕೊಡಲು ಈ ಕಿರುಹೊತ್ತಿಗೆ ಹೊರಟಿದೆ. ಕನ್ನಡನಾಡಿನ ಸಹೃದಯರು ಕೃಪೆಯಿಟ್ಟು ಓದುವರೆಂದು ಆಶಿಸಲಾಗಿದೆ. ದೇಶದ ಅಮೂಲ್ಯ ವನ್ಯಸಂಪತ್ತನ್ನು ರಕ್ಷಿಸಿ ವರ್ಧಿಸುವದರಲ್ಲಿ ಅಧಿಕಾರಿಗಳ, ರಾಜಕಾರಣಿಗಳ ಹಾಗೂ ಜನಸಾಮಾನ್ಯರ ಸರ್ವತೋಮುಖ ಸಹಕಾರ ಅವಶ್ಯ ಎಂದು ಹೇಳುತ್ತಿರುವ ಕಾಲ ಶೀಘ್ರವಾಗಿ ಕಳೆದು ಹೋಗಬೇಕಾಗಿದೆ.

ಅಂದು ನನ್ನ ಉಪನ್ಯಾಸವನ್ನು ಏರ್ಪಡಿಸಿ, ಇಂದು ಈ ಪುಸ್ತಿಕೆಯನ್ನು ಪ್ರಕಟಿಸಿ, ನನಗೆ ಹಾಗೂ ನನ್ನ ವಿಚಾರಗಳಿಗೆ

ಗೌರವ ತೋರಿಸಿದ್ದಕ್ಕಾಗಿ ಕರ್ನಾಟಕ ವಿಶ್ವವಿದ್ಯಾಲಯದ ಎಲ್ಲ ಅಧಿಕಾರಿಗಳ ವಿಶೇಷತಃ ಪ್ರಕಟನಶಾಖೆಯ ನಿರ್ದೇಶಕರಾದ ಶ್ರೀ ಚೆನ್ನವೀರ ಕಣವಿ ಹಾಗೂ ಉಪನಿರ್ದೇಶಕರಾದ ಶ್ರೀ ಎಸ್. ಬಿ. ನಾಯಕ ಅವರ ಸೌಜನ್ಯಕ್ಕೆ ನಾನು ಋಣಿ.

ಈ ಪುಸ್ತಿಕೆಯನ್ನು ಅಂದವಾಗಿ ಮುದ್ರಿಸಿದ ಅಚ್ಚುಮನೆಯವರಿಗೆ ನನ್ನ ಕೃತಜ್ಞತೆಗಳು.

**ಡಾ|| ಏ. ವ್ಹಿ. ಬಾಳಿಗಾ** **ಟಿ. ಎಂ. ಪಂಡಿತ**

ವಾಣಿಜ್ಯ ಕಾಲೇಜು,
ಕುಮಟಾ (ಉ. ಕ.)

# ಪ ರಿ ವಿ ಡಿ

# ೧. ಅರಣ್ಯ : ಸ್ವರೂಪ ಮತ್ತು ವೈಶಾಲ್ಯ

" ಕಾಡಿಲ್ಲದ ನಾಡು ಬೆಂಗಾಡು "

ಬೇಕು ಬೇಕಾದಂತೆ ಬೆಳೆದ ಗಿಡಮರಗಳು, ನಿಬಿಡವಾಗಿ ಹಬ್ಬಿದ ಪೊದೆ-ಬಳ್ಳಿಗಳು, ವನ್ಯ ಮೃಗಗಳಿಂದ ಕೂಡಿರುವ ಭಯಂಕರ ಪ್ರದೇಶ, ಓಡಾಡಲು ದಾರಿಯಿರುವದಿಲ್ಲ, ನಿಲ್ಲಲು ನೆಲೆಯಿರುವದಿಲ್ಲ, ಮೃಗಗಳ ಹಾವಳಿಯಿಂದ ರಕ್ಷಣೆಯಿಲ್ಲ– ಇವು ಅರಣ್ಯ ಎಂದೊಡನೆ ಮನೋಭಿತ್ತಿಯ ಮೇಲೆ ಢಾಳವಾಗಿ ಮೂಡುವ ಸಾಮಾನ್ಯ ಶೀಘ್ರ ಚಿತ್ರ. ಪ್ರಾಸಂಗಿಕವಾಗಿ ಅರಣ್ಯಗಳಿಗೆ ಕಾಡು, ಕಾನು, ಅಡವಿ, ಹಳವು, ವಿಪಿನ ಹಾಗೂ ವನ ಎಂಬುದಾಗಿಯೂ ಕರೆಯುವ ವಾಡಿಕೆ. ಅರಣ್ಯ ರಾಷ್ಟ್ರದ ಸಂಪತ್ತು, ಸಜೀವ ಸಂಪತ್ತು. ಅರಣ್ಯ ಶಬ್ದಕ್ಕೆ ಸಾರ್ವತ್ರಿಕ ವ್ಯಾಪ್ತಿಯೆಂಬುದಿಲ್ಲ. ಆ ಶಬ್ದದ ವ್ಯಾಪ್ತಿ, ಆಯಾ ದೇಶದ ಸಂವಿಧಾನಕ್ಕನುಗುಣವಾಗಿದೆ. ಇಂತಹ ವ್ಯಾಪ್ತಿ ಕಾಲಾನುಸಾರ ಬದಲಾವಣೆಗೊಂಡಿದೆ. ಅರಣ್ಯಕ್ಕೆ ಸೇರಿದ ಭೂಸ್ವಾಮಿತ್ವ ಯಾರದಾಗಿದ್ದರೂ ಕಾಯಿದೆಗಳಿಗೆ ಸರ್ವವ್ಯಾಪಿ ಇದ್ದೇ ಇದೆ. " ಸಸ್ಯ ಸಮುದಾಯ ವ್ಯಾಪಿಸಿರುವ, ಎಲ್ಲ ಗಾತ್ರದ ಗಿಡ–ಮರಗಳು ಪ್ರಧಾನವಾಗಿರುವ, ಕಡಿಯಲಿ ಬಿಡಲಿ ಮರಮುಟ್ಟು, ಸೌದೆ ಒದಗಿಸಲು ಸಮರ್ಥವಾಗಿರುವ ಅಥವಾ ಸ್ಥಳೀಯ ಹವೆಯ ಮೇಲೆ ಅಥವಾ ಜಲಸಂಪತ್ತಿನ

ಮೇಲೆ ಪ್ರಭಾವ ಬೀರಲು ಶಕ್ತವಾಗಿರುವ ಎಲ್ಲ ನೆಲಗಳ
ಅರಣ್ಯ” ಎಂಬುದಾಗಿ ಸಂಯುಕ್ತ ರಾಷ್ಟ್ರಗಳ (ಯು. ಎನ್.
ಆಹಾರ ಮತ್ತು ವ್ಯವಸಾಯ ಸಂಸ್ಥೆ (ಫುಡ್ ಅಂಡ್ ಅಗ
ಕಲ್ಚರಲ್ ಆರ್ಗನೈಜೇಶನ್– ಎಫ್. ಎ. ಓ) ಅರಣ್ಯ ಶಬ್ದಕ್ಕೆ
ವ್ಯಾಖ್ಯೆ ನೀಡಿದೆ. ಆದರೆ ಕೇವಲ ಗಿಡ–ಮರ ಮುಂತಾದ
ಸಸ್ಯ ಸಮುದಾಯಕ್ಕೆ ಮಾತ್ರ “ಅರಣ್ಯ” ಶಬ್ದ ಸೀಮಿತ
ವಾಗಿಲ್ಲ. ಹಾಗೆ ಹೇಳಿದರೆ ಅರಣ್ಯ ಶಬ್ದದ ವೈಶಾಲ್ಯವನ್ನು
ಮೊಟಕುಗೊಳಿಸಿದಂತಾಗುತ್ತದೆ. ಆ ಪ್ರದೇಶದಲ್ಲಿರುವ ಕ್ರಿಮಿ
ಕೀಟ, ಪ್ರಾಣಿ, ಅರಣ್ಯೋತ್ಪತ್ತಿ ಇವೆಲ್ಲ ಅರಣ್ಯ ಶಬ್ದದ
ವೈಶಾಲ್ಯದಲ್ಲಿ ಹಮ್ಮಿಕೊಂಡಿವೆ. ೨೦ ನೆಯ ಶತಮಾನದ
ದ್ವಿತೀಯಾರ್ಧದಲ್ಲಿ ಪ್ರಪಂಚದ ನೆಲದ ಶೇಕಡಾ ೩೩ ರಷ್ಟು
ಭಾಗ ಅರಣ್ಯಾವೃತವಾಗಿತ್ತು. ಅವುಗಳ ಒಟ್ಟು ವಿಸ್ತಾರ
೬,೫೦೦,೦೦೦,೦೦೦ ಎಕರೆಗಳು. ಇನ್ನೂ ಶೇಕಡಾ ೨೫ ರಷ್ಟು
ಭಾಗ ಒಂದು ಕಾಲದಲ್ಲಿ ವನದೇವಿಯ ವಿಸ್ತಾರದೊಳಗಿ
ದ್ದರೂ ಇಂದು ಅದು ನೇಗಿಲಯೋಗಿಯ ಯೋಗಮುದ್ರೆ
ಯೊಳಗೆ ಬಂದಿದೆ. ಸೋವಿಯತ್ ರಶಿಯಾ ಮತ್ತು ಬ್ರೆಜಿಲ್
ಗಳು ಪ್ರಪಂಚದ ಅತ್ಯಂತ ವಿಸ್ತಾರ ಅರಣ್ಯಗಳನ್ನು ಹೊಂದಿವೆ
ದಟ್ಟವಾದ ಅರಣ್ಯಗಳು, ವಿಸ್ತಾರವಾದ ಬಯಲು ಪ್ರದೇಶ
ಹಾಗೂ ಹುಲ್ಲುಗಾವಲುಗಳಿಂದ ಕೂಡಿದ ಸೋವಿಯತ್
ನಾಡು ಪ್ರಾಣಿ ಸಂಪತ್ತಿನಲ್ಲೂ ಅಸದೃಶವಾಗಿದೆ. ಬೆರಗ
ಗೊಳಿಸುವ ವನ್ಯ ಮೃಗಗಳಿಂದ ಹಿಡಿದು ತುಂಬ ಸುಂದರವಾದ
ರೆಕ್ಕೆಗಳುಳ್ಳ ಪಕ್ಷಿಸಮುದಾಯವುಳ್ಳ ಸೋವಿಯತ್ ಒಕ್ಕೂ

| | | |
|---|---|---|
| ಲ್ಯಾಟಿನ್ ಅಮೇರಿಕ | ೨೩ | ೪೬ |
| ಆಫ್ರಿಕಾ | ೧೭ | ೨೫ |
| ಏಷ್ಯಾ | ೧೨ | ೧೯ |
| ಪೆಸಿಫಿಕ್ | ೦೨ | — |
| | ೧೦೦ | ೩೩ |

[ಆಧಾರ : ಎಫ್. ಎ ಓ. ವರದಿ, ೧೯೬೦]

## " ನಮೋ ಎಂಬೆನು ನಿನಗೆ "

ಹಿಂದುಗಳ ಜೀವನದಲ್ಲಿ ವೃಕ್ಷ ಪರಿಸರ ಬಹು ಹಿಂದಿನಿಂದಲೂ ಹಾಸುಹೊಕ್ಕಾಗಿದೆ. ವೇದ ಪಠಣ ಅವುಗಳಡಿಯಲ್ಲಿ ನಡೆಯಿತು. ಋಷಿಗಳು ವೃಕ್ಷದಡಿಗಳಲ್ಲಿ ತಪಂಗೈದು ದೇವರನ್ನು ಕಂಡು ದೇವಮಾನವರಾದರು. ಯಮಧರ್ಮರಾಜನು ಒಂದು ವೃಕ್ಷದಡಿಯಲ್ಲಿ ಕುಳಿತು ತನ್ನ ರಾಜ್ಯಭಾರವನ್ನು ನಡೆಸುತ್ತಾನೆಂಬ ವಿಷಯ ಅತ್ಯಂತ ಪ್ರಾಚೀನವಾದ ಋಗ್ವೇದದಲ್ಲಿ ಉಲ್ಲೇಖಿತವಾಗಿದೆ. ದೇವತೆಗಳು ಅತ್ತಿ ಮರದ ನೆರಳಿನಲ್ಲಿ ಕೂಟಸ್ಥರಾಗಿ ವಿಚಾರ ವಿನಿಮಯ, ಮಾತುಕತೆ ನಡೆಸುತ್ತಾರೆಂದು ಅಥರ್ವವೇದದಲ್ಲಿದೆ. ಸಿದ್ಧಾರ್ಥ ಬುದ್ಧನಾದುದು ಬೋಧಿ ವೃಕ್ಷದಡಿಯಲ್ಲಿಯೇ. ಬಿಲ್ವ ವೃಕ್ಷವು

ಭಾವಿಕರಾದ ಭಾರತೀಯರಿಗೆ ಬಹು ಪ್ರಿಯವಾದ ವೃಕ್ಷ. ಬ್ರಹ್ಮ, ವಿಷ್ಣು, ಮಹೇಶ್ವರರು ಏಕತ್ರರಾಗಿ ಬಿಲ್ವವೃಕ್ಷದ ದಳಗಳಲ್ಲಿ ವಾಸಿಸುವರೆಂಬ ನಂಬಿಕೆ ಇದೆ. ಬಿಲ್ವ ಪತ್ರೆಯ ಹಿಂಭಾಗದಲ್ಲಿ ಇಂದ್ರಾದಿ ಲೋಕಪಾಲಕರು ವಾಸಿಸುವರೆಂಬ ನಂಬಿಕೆ ನಮ್ಮದಾಗಿದೆ. ಈ ವೃಕ್ಷವನ್ನು ದುರ್ಗಾರೂಪದಲ್ಲಿ ಪೂಜಿಸುವ ಪದ್ಧತಿ ಬಂಗಾಳದಲ್ಲಿದೆ. ಅಲ್ಲಿಯ ಸ್ತ್ರೀಯರು ತಮ್ಮ ಪತಿಯ ಪ್ರೇಮಕ್ಕಾಗಿಯೂ, ಯೋಗ್ಯವಾದ ವರನು ಪ್ರಾಪ್ತನಾಗಲೆಂದೂ ಈ ವೃಕ್ಷವನ್ನು ಅನನ್ಯವಾಗಿ ಪೂಜಿಸುತ್ತಾರೆ. ಅಶ್ವತ್ಥ, ಅತ್ತಿ, ಆಲ, ಬೇವು, ಅರಳಿ ಮುಂತಾದ ವೃಕ್ಷಗಳಿಗೆ ಅರಿಶಿನ ಕುಂಕುಮ ಹಚ್ಚಿ ನಮಿಸುವದು ಇಂದಿಗೂ ಹಿಂದುಗಳ ಧಾರ್ಮಿಕ ಸಂಪ್ರದಾಯವಾಗಿ ಉಳಿದುಕೊಂಡಿದೆ. ವೃಕ್ಷಗಳ ನೆರಳಿನಲ್ಲಿ ತಂಗಾಳಿಗೆ ಮೈ ಒಡ್ಡಿ ವಿಹರಿಸುವರು ವಿಲಾಸಿ ರಸಿಕರು. ಕವಿಗಳಿಗೆ, ಸಾಹಿತಿಗಳಿಗೆ ವೃಕ್ಷಗಳು ಚೈತನ್ಯದಾಸರೆಗಳಾಗಿವೆ. ಆದಿಕವಿ ವಾಲ್ಮೀಕಿ ಚಿತ್ರಕೂಟವನ್ನು ವರ್ಣಿಸುವ ರೀತಿ ಮನೋಜ್ಞವಾಗಿದೆ. ದಂಡಕಾರಣ್ಯದ ಸೌಂದರ್ಯವನ್ನು ನಮ್ಮ ಕಣ್ಮುಂದೆ ಸ್ಪಷ್ಟವಾಗಿ ಚಿತ್ರಿಸಿದಂತಿದೆ ಆ ವರ್ಣನೆ. ಕವಿತಾಕಾಮಿನಿಯ ವಿಲಾಸ ಕವಿಕುಲಗುರು ಕಾಳಿದಾಸನು ತನ್ನ ಖಂಡಕಾವ್ಯ "ಮೇಘದೂತ"ದಲ್ಲಿ ವರ್ಣಿಸಿದ ಮರಗಳು ಹಲವು—ಬಿದಿರು, ಬಾಲಮಂದಾರ ಎಲ್ಲವೂ ಅಲ್ಲಿವೆ. ಪ್ರೇಮ ಉಳಿದು ಬೆಳೆದ ಕತೆಯಾದ ಬಾಣಭಟ್ಟನ ಕಾದಂಬರಿಯಲ್ಲಿ ಅಲಿ ಅಲಿಯಾಗಿ ಮರಗಳ ಹೆಸರು ಬಂದಿವೆ ಹಾಗೂ ಅವುಗಳ ವಿಶೇಷ ಗುಣಾತಿಶಯಗಳೂ ಅಲ್ಲಿ

ವಿವರಿಸಲ್ಪಟ್ಟಿದೆ. ಜಾಡಿಹಣ್ಣಾದ ಕವಿ ರವೀಂದ್ರರು ತಮ್ಮ "ವೃಕ್ಷವಂದನ" ಎಂಬ ಕವಿತೆಯಲ್ಲಿ ವೃಕ್ಷಗಳನ್ನು ವಂದಿಸುತ್ತ "ವೃಕ್ಷವೇ, ನೀನೇ ಭಗವಂತ. ಸೂರ್ಯನನ್ನು ಮೊದಲು ಸೇವಿಸುವವನು ನೀನು. ಜೀವರಾಶಿಗಳಿಗೆ ಬಾಳುವೆಯನ್ನು ಕೊಡುವವನು ನೀನು. ಭೂದೇವಿಯ ಗಂಭೀರತೆಯು ನಿನ್ನಿಂದಲೇ. ನೀನಿಲ್ಲದೆ ಭೂಮಿಯ ಮೇಲೆ ಜೀವವೇ ಇಲ್ಲ. ನಿನಗೆ ನಮೋ ಎಂಬೆನು" ಎಂದು ವೃಕ್ಷಗಳ ಹಿರಿಮೆಯನ್ನು ಕೊಂಡಾಡಿದರು.

## ಯೋಗಿ ಶ್ರೇಷ್ಠರು ಕಂಡಂತೆ

ಭಾರತದ ಪ್ರಾಚೀನ ಗ್ರಂಥ, ನೀತಿಸಾರ ಹಾಗೂ ಸೂತ್ರಗಳಲ್ಲಿ ಅರಣ್ಯಗಳ ವರ್ಣನೆ, ಪ್ರಯೋಜನ, ಸಂರಕ್ಷಣೆ ಇವುಗಳ ಉಲ್ಲೇಖಗಳು ವಿಸ್ತೃತವಾಗಿವೆ. ಪಾಣಿನಿಯ ಸೂತ್ರಗಳಲ್ಲಿ ವಿವಿಧ ಅರಣ್ಯ ವೃಕ್ಷಗಳು, ಅರಣ್ಯಗಳ ವರ್ಗೀಕರಣ, ಪ್ರಾಮುಖ್ಯತೆ, ಸಂರಕ್ಷಣೆ ಇವುಗಳ ಕುರಿತಾದ ಪ್ರಸ್ತಾವನೆಗಳಿವೆ. ಯೋಗಿಶ್ರೇಷ್ಠರ ವಂಶದಲ್ಲಿ ಜನಿಸಿ ತ್ಯಾಗಿಯಂತೆ ಜೀವಿಸಿ, ಚತುರ್ವೇದಗಳಲ್ಲಿ ಪಾರಂಗತನಾಗಿ ವೇದಾಂತಿಗಳಲ್ಲಿ ಅಗ್ರಗಣ್ಯನಾಗಿ ಪೂಜ್ಯ ಸ್ಥಾನವನ್ನು ಗಳಿಸಿ ವೀರ ದೇಶಗಳಲ್ಲೆಲ್ಲಾ ಅಗ್ನಿದೇವನಂತೆ ಹೊಳೆದು ಸಿಡಿಲಿನಂತಹ ತನ್ನ ಆತ್ಮಶಕ್ತಿಯಿಂದ ಬೆಟ್ಟದಂತಹ ಸಂಕಟವನ್ನು ಉರುಳಿಸಿ ಇನ್ನೊಬ್ಬರ ಸಹಾಯವನ್ನಪೇಕ್ಷಿಸದೆ, ತನ್ನ ಬುದ್ಧಿ ಕೌಶಲ್ಯದಿಂದ ದೇವತೆಗಳ ಸೈನ್ಯಾಧಿಪತಿಗೆ ಸರಿದೂಗುವ ಸಾಹಸ

ದಿಂದ ಸಾಮ್ರಾಜ್ಯವು ಚಂದ್ರಗುಪ್ತನಿಗೆ ಚಕ್ರಾಧಿಪತ್ಯವನ್ನು ದೊರಕಿಸಿಕೊಟ್ಟ ಅವನ ತೇಜಸ್ವಿ ಕೌಟಿಲ್ಯನೂ ಸ್ವತಃ ಸಾಮ್ರಾಜ್ಯದೊಂದರ ನಿರ್ವಹಣೆ ಹಾಗೂ ಅದರ ಉತ್ತಮ ಆಡಳಿತ ಸಮಸ್ಯೆಗಳ ಬಗ್ಗೆ ರಚಿತವಾದ, ಅತ್ಯಂತ ಸಂಕೀರ್ಣವಾದ, ಹದಿನೈದು ಅಧಿಕರಣಗಳು ಮತ್ತು ೧೫೦ ಪರಿಚ್ಛೇದಗಳನ್ನೊಳಗೊಂಡ ತನ್ನ ದೊಡ್ಡ ಗ್ರಂಥ ಅರ್ಥಶಾಸ್ತ್ರದಲ್ಲಿ ಅಂದಿನ ಅರಣ್ಯ ಶಾಸ್ತ್ರದ ಸ್ವರೂಪ ಹಾಗೂ ವೈಶಾಲ್ಯದ ವಿವರಣಾತ್ಮಕ ವಿವೇಚನೆಯನ್ನು ನೀಡಿರುವನು. ಅವುಗಳ ಮುಖ್ಯಾಂಶ ಹೀಗಿವೆ—ಅರಣ್ಯಗಳು ಸರಕಾರದ ಏಕಸ್ವಾಮ್ಯಕ್ಕೆ ಸೇರಿದ್ದವು. ಉತ್ಪಾದಕ ಅರಣ್ಯಗಳು ಪ್ರತ್ಯೇಕವಾದ ಅರಣ್ಯ ಇಲಾಖೆಯ ಮೇಲ್ವಿಚಾರಣೆಯಲ್ಲಿದ್ದವು. ಆನೆಗಳು, ಮರಮುಟ್ಟುಗಳು ಹಾಗೂ ಇತರ ಅರಣ್ಯೋತ್ಪಾದನೆಗಳು— ಇವು ಅರಣ್ಯದಿಂದ ಬರುತ್ತಿದ್ದ ಉತ್ಪಾದನೆಗಳು. ನಿರುತ್ಪಾದಕ ಅರಣ್ಯಗಳನ್ನು ಮುಖ್ಯವಾಗಿ ಬೇಟೆಗಾಗಿ ಬಳಸಲಾಗುತ್ತಿತ್ತು. ಅರಣ್ಯಗಳ ಸಮೀಪದಲ್ಲಿ ಕಾರ್ಖಾನೆಗಳನ್ನು ನಿರ್ಮಿಸಲಾಗುತ್ತಿತ್ತು. ಬಣ್ಣಗಳು, ಕಾಡುಬೀಜಗಳಿಂದ ಎಣ್ಣೆ, ಬಿದಿರು ಹಾಗೂ ಪದಾರ್ಥಗಳು ಮತ್ತು ಕೆಲವು ಇಲ್ಲಿಯ ತಯಾರಿಕೆಗಳಾಗಿದ್ದವು. ಒಂದೊಂದು ಜಾತಿಯ ಮರಗಳಿಗೆ ಒಂದೊಂದು ಕಾಡನ್ನೇ ಏರ್ಪಡಿಸಬೇಕು. ಅರಣ್ಯ ಹುಟ್ಟುವಳಿಯಿಂದ ಜೀವಿಸುವ ಮನುಷ್ಯರು ಕಾಡಿಗೆ ಸಂಬಂಧಿಸಿದ ಕೆಲಸಗಳನ್ನು

೧. "ಕಾಮಂದಕ" ಭಾಗ ೧ (೭-೭)

ಹಾಗೂ ಕಾಡನ್ನು ಬೆಳೆಸುವ ಕೆಲಸಗಳನ್ನು ಮಾಡಬೇಕೆಂಬುದು ಕೌಟಿಲ್ಯನ ಮತ. ಅರಣ್ಯಗಳನ್ನು ಹಾಗೂ ಅರಣ್ಯೋತ್ಪತ್ತಿಗಳನ್ನು ಹಾಳುಮಾಡುವವರಿಗೆ ಶಿಕ್ಷೆ ವಿಧಿಸಲಾಗುತ್ತಿತ್ತು. ಕುಪ್ಯಾಧ್ಯಕ್ಷ (ಅರಣ್ಯಾಧಿಕಾರಿ) ನ ಒಪ್ಪಿಗೆಯಿಲ್ಲದೆ ಮರ ಕಡಿದರೆ ದಂಡ ವಿಧಿಸಲಾಗುತ್ತಿತ್ತು. ಆದರೆ ಅತ್ಯಂತ ಕಾಲವಿಲಂಬವನ್ನು ಮಾಡಲು ಸಾಧ್ಯವಿಲ್ಲದ ಸಂದರ್ಭಗಳಲ್ಲಿ ಒಪ್ಪಿಗೆ ಇಲ್ಲದೆ ಮರ ಕಡಿದರೆ ದಂಡ ವಿಧಿಸಬಾರದು ಎಂಬುದಾಗಿ ಕುಪ್ಯಾಧ್ಯಕ್ಷ ಪ್ರಕರಣದಲ್ಲಿ ಕೌಟಿಲ್ಯನು ವಿವರಿಸಿರುವನು. ಅರಣ್ಯ ಸಂರಕ್ಷಣೆಗೆ ಅಧಿಕ ಗಮನಕೊಡುವದು, ಅರಣ್ಯಾದಾಯವನ್ನು ಹೆಚ್ಚಿಸುವಂತೆ ಮಾಡುವದು ಹಾಗೂ ಸಾರ್ವಜನಿಕರಿಗೆ ಅರಣ್ಯಗಳ ಮಹತ್ವದ ಬಗ್ಗೆ ಸೂಕ್ತ ತಿಳುವಳಿಕೆ ನೀಡುವದು ಇವು ಕುಪ್ಯಾಧ್ಯಕ್ಷನ ಮುಖ್ಯ ಕರ್ತವ್ಯಗಳು. ವನ್ಯಮೃಗಗಳನ್ನು ಯಾವದೇ ಹವ್ಯಾಸಕ್ಕಾಗಿ ವಧಿಸುವದು ಅಪರಾಧ ಎಂಬುದು ಕೌಟಿಲ್ಯನ ಮತ. ಕೆಲವು ಜಾತಿಯ ಪ್ರಾಣಿಗಳನ್ನು ಅಪತ್ಕಾಲದಲ್ಲಿ ಹೊರತುಪಡಿಸಿ ಕ್ರೀಡೆಗಾಗಿ ಕೊಲ್ಲುವದನ್ನು ನಿಷೇಧಿಸಲಾಗುತ್ತಿತ್ತು. ಸೂನಾಧ್ಯಕ್ಷ (ವನ್ಯ ಪ್ರಾಣಿಗಳ ಮೇಲ್ವಿಚಾರಕ) ನು ಬೇಟೆಯಾಡುವದಕ್ಕೆ ಪ್ರತಿಬಂಧಿಸಲ್ಪಟ್ಟ ಕಾಡಿನಲ್ಲಿರುವ ಮೃಗ, ಪಶು–ಪಕ್ಷಿ, ಮೀನುಗಳನ್ನು ಬಂಧಿಸಿದವರಿಗೆ, ಹಿಂಸಿಸಿದವರಿಗೆ, ಕೊಂದವರಿಗೆ ಉತ್ತಮ ಸಾಹಸ ದಂಡನೆಯನ್ನು ವಿಧಿಸಬೇಕು. ಅಭಯವನದಲ್ಲಿ ವಾಸಿಸುವ ಮೃಗಗಳ ವಿಷಯದಲ್ಲಿಯೂ ಬಂಧನಾದಿಗಳನ್ನು ಮಾಡಿದವರಿಗೆ ಅದೇ ದಂಡನೆ. ಕ್ರೌಂಚ,

ಉತ್ಕ್ರೋಶಕ, ದಾತ್ಯೂಹ, ನವಿಲು, ಗಿಳಿ, ಜೀವಂಜೀವಕ, ಚಕ್ರವಾಕ, ಚಕೋರ, ಭೃಂಗರಾಜ, ಹಂಸ, ದಾತ್ಯೂಹ ಮೊದಲಾದ ಆಟಕ್ಕಾಗಿ ಸಾಕುವ ಪಕ್ಷಿಗಳ, ಮಂಗಲಕರವಾದ ಇತರ ಮೃಗಗಳ ಹಿಂಸೆ ನಡೆಯದಂತೆ ನೋಡಿಕೊಳ್ಳಬೇಕು— ಇವೇ ಮುಂತಾಗಿ ಸೂನಾಧ್ಯಕ್ಷಃ ಎಂಬ ಪ್ರಕರಣದಲ್ಲಿ ಕೌಟಿಲ್ಯನು ವಿವರಿಸಿರುವನು. ಆರು ಯೋಜನ ಸುತ್ತಳತೆಯುಳ್ಳ ಎಲ್ಲ ಅರಣ್ಯಗಳೂ ರಾಜಮಾರ್ಗ ಹೊಂದಿರಬೇಕೆಂಬ ನಿಯಮವನ್ನು ಶುಕ್ರಾಚಾರ್ಯರ ಶುಕ್ರನೀತಿಸಾರದಲ್ಲಿ ಉಲ್ಲೇಖಿಸಲಾಗಿದೆ. ಉಪಯುಕ್ತ ಮರಗಳನ್ನಷ್ಟೇ ಹೆಚ್ಚಾಗಿ ಬೆಳೆಸಲು ಹಾಗೂ ಉಳಿಸಲು ರಾಜನು ಪ್ರೋತ್ಸಾಹ ಕೊಡಬೇಕೆಂಬ ವಿಷಯವನ್ನು ಶುಕ್ರಾಚಾರ್ಯರು ಒತ್ತಿಹೇಳಿರುವದು ತುಂಬ ಗಮನಾರ್ಹವಾಗಿದೆ. ಹೀಗೆ ಅರಣ್ಯ ಸಂರಕ್ಷಣೆ ಹಾಗೂ ಅರಣ್ಯೋತ್ಪತ್ತಿ ವರ್ಧನೆಗೆ ಬಹು ಹಿಂದಿನಿಂದಲೂ ಪ್ರಾಶಸ್ತ್ಯ ನೀಡಲಾಗುತ್ತಿತ್ತು ಎಂಬುದು ಮೇಲೆ ನೀಡಿದ ಕೆಲವು ಅವತರಣಿಕೆಗಳಿಂದ ವಿದಿತ ಹಾಗೂ ವೇದ್ಯವಾಗುವದು. ಇಂದು ನಾವು ಎಷ್ಟರಮಟ್ಟಿಗೆ ಅರಣ್ಯಾಭಿವೃದ್ಧಿ ಹಾಗೂ ಅರಣ್ಯ ಸಂರಕ್ಷಣೆಯಲ್ಲಿ ಜಾಗೃತರಾಗಿದ್ದೇವೆ ಎಂಬುದು ಅಂತರ್ದರ್ಶನ ಮಾಡಬೇಕಾದ ಪ್ರಶ್ನೆ. ವನಶ್ರೀ ವರ್ಧನೆ ನಮಗೆ ರಾತ್ರಿಕಂಡು ಮುಂಜಾವಿಗೆ ಮರೆಯುವ ಒಂದು ಕನಸಿನಂತಾಗಬಾರದು.

# ೨. ನಮ್ಮ ಅರಣ್ಯಗಳು

## " ಒಂದು ಗಿಡ ಹತ್ತು ಮಕ್ಕಳ ತಾಯಿ "

ಅರಣ್ಯಗಳು ಒಂದು ದೇಶದ ನೈಸರ್ಗಿಕ ಸಂಪತ್ತಿನಲ್ಲಿ ಬಹು ಮುಖ್ಯ ಪ್ರಕಾರವಾಗಿವೆ. ನಮ್ಮ ದೇಶದಲ್ಲಿ ೭೫೩.೫೯ ಲಕ್ಷ ಹೆಕ್ಟೇರು ಪ್ರದೇಶವು ಅರಣ್ಯಾವೃತವಾಗಿದ್ದು ಅದು ದೇಶದ ಒಟ್ಟು ವಿಸ್ತಾರದ ಶೇಕಡಾ ೨೨ರಷ್ಟು ಆಗುವದು. ಇದು ಸಾಲದು; ಉಷ್ಣ ವಲಯದ ವಾಯುಗುಣವಿರುವ ನಮ್ಮ ನಾಡಿನಲ್ಲಿ ಒಟ್ಟು ವಿಸ್ತೀರ್ಣದ ೧/೩ ಭಾಗ ಅರಣ್ಯವಾಗಿದ್ದರೆ ಯೋಗ್ಯ ಹವಾಮಾನ ಹೊಂದಿರಬಹುದೆಂದು ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ನಮ್ಮ ದೇಶದಲ್ಲಿ ಅರಣ್ಯಗಳ ತಲಾ ವಿಸ್ತೀರ್ಣ ಕೇವಲ ೦.೨ ಹೆಕ್ಟೇರು ಇದ್ದರೆ ಅದು ಅಮೇರಿಕದಲ್ಲಿ ೧.೮ ಮತ್ತು ರಷ್ಯದಲ್ಲಿ ೩.೨ ರಷ್ಟಿದೆ. ಈ ದೃಷ್ಟಿಯಿಂದ ನಮ್ಮ ಅರಣ್ಯಗಳ ವಿಸ್ತೀರ್ಣವನ್ನು ಹೆಚ್ಚಿಸಬೇಕಾಗಿದೆ. ನಮ್ಮ ದೇಶದ ಅರಣ್ಯಗಳಲ್ಲಿ ಐದು ಬೇರೆ ಬೇರೆ ಬಗೆಗಳಿವೆ. ಹಸಿರೆಲೆಗಳಿಂದ ತುಂಬಿರುವ ವೃಕ್ಷರಾಜಿಯನ್ನು ಹೊಂದಿರುವ ಅರಣ್ಯಗಳು ಕೆಲವು. ಬೇಸಿಗೆ ಕಾಲದಲ್ಲಿ ಎಲೆಯೆಲ್ಲ ಉದುರಿ ಮರಗಳು ಬೋಳಾಗಿ ನಿಲ್ಲುವಂಥ ಅರಣ್ಯಗಳು ಇನ್ನು ಕೆಲವು. ಯಾವಾಗಲೂ ಒಣಮರಗಳೇ ಹೆಚ್ಚಿನ ಸಂಖ್ಯೆಯಲ್ಲಿರುವವು

ಕೆಲವು. ಬೆಟ್ಟಗುಡ್ಡಗಳ ಮೇಲೆ ನಿಂತಿರುವ ಅರಣ್ಯಗಳು ನಾಲ್ಕನೆಯ ಬಗೆ. ಕಡೆಯದಾಗಿ ನದಿಗಳ ಪಕ್ಕದಲ್ಲಿ ನಿಂತ ಅರಣ್ಯಗಳು. ಮೊದಲನೆಯದು ಉಷ್ಣವಲಯದ ನಿತ್ಯ ಹರಿದ್ವರ್ಣ ಕಾಡುಗಳು ಎನಿಸಿಕೊಳ್ಳುತ್ತವೆ. ಎರಡನೆಯದು ಎಲೆ ಉದುರುವ ಕಾಡುಗಳು— ಪರ್ಣಪಾತಿಗಳು.

ದೇಶದ ಆರ್ಥಿಕ ರಂಗದಲ್ಲಿ ಅರಣ್ಯಗಳ ಪಾತ್ರ ಸಣ್ಣದಲ್ಲ. ನಮ್ಮ ಅರಣ್ಯಗಳು ಪ್ರತಿ ವರುಷ ಸುಮಾರು ೧೨೫ ಕೋಟಿ ರೂಪಾಯಿಗಳ ಉತ್ಪನ್ನ ತರುವವು ಎಂಬುದನ್ನು ಅಂಕಿ–ಅಂಶಗಳು ಮರೆಮಾಚಲಾರವು. ಪ್ರತಿ ಹೆಕ್ಟೇರಿಗೆ ಸರಾಸರಿ ರೂ. ೨೧.೩೦ ವರಮಾನವಿದೆ. ಅರಣ್ಯಗಳ ಮಹತಿಯನ್ನು ಇಲ್ಲಿ ಕೇವಲ ಹಣ ಮಾತ್ರದಿಂದ ಅಳೆಯುವಂತಿಲ್ಲ. ಹಣಕ್ಕಿಂತ ಮಿಗಿಲಾದ ದೇಶದ ಅಭಿವೃದ್ಧಿ ಯೋಜನೆಯ ವಿವಿಧ ಚಟುವಟಿಕೆಗಳ ನಿರ್ವಹಣೆಗೆ ಅವಶ್ಯವಿರುವ ಅನೇಕ ಕಚ್ಚಾ ಸಾಮಗ್ರಿಗಳ ವಿಶೇಷ ಪೂರೈಕೆ ಅರಣ್ಯಗಳಿಂದಾಗುವದು. ಇದಲ್ಲದೆ ಅರಣ್ಯಗಳು ನಮ್ಮಲ್ಲಿ ಅನೇಕ ಜನರಿಗೆ ಉದ್ಯೋಗ ದಾಸರೆ ಕೊಡುವ ಮೂಲಗಳಲ್ಲಿ ಒಂದಾಗಿವೆ. ಇಂದು ಸುಮಾರು ೯೦ ಲಕ್ಷ ಜನರು ಅರಣ್ಯೋದ್ಯಮ ( ಫಾರೆಸ್ಟ ಒಕ್ಯುಪೇಶನ್ ) ಗಳಲ್ಲಿ ನಿರತರಾಗಿದ್ದಾರೆ. ಚೌಬೀನ ತಯಾರಿಕೆ, ಮರ ಸಂಸ್ಕರಣೆ, ಪದರ ಹಲಗೆ, ಪೀಠೋಪಕರಣ, ನಾರು ಹಲಗೆ, ಚಕ್ಕೆ ಹಲಗೆ, ಪಟ್ಟಿ ಹಲಗೆ, ಗಟ್ಟಿ ಹಲಗೆ, ಕಾಗದದ ಪಲ್ಪ್, ಮತ್ತು ರೇಯಾನ, ಬೆಂಕಿಕಡ್ಡಿ, ಇದ್ದಿಲು,

ಗಂಧದ ಎಣ್ಣೆ, ಕಾಚು, ರೋಸಿನ್, ಟರ್‌ಪೆಂಟೈನ್, ಅರಗು, ಕರ್ಪೂರ, ಗೋಂದು, ರೇಷ್ಮೆ ಮುಂತಾದ ನಾಡಿನಲ್ಲಿ ನಡೆಯುವ ಕೈಗಾರಿಕೆಗಳು ವನ್ಯಜನಿತ ಮೂಲ ಸಾಮಗ್ರಿಗಳನ್ನೇ ನೇರವಾಗಿ ಅವಲಂಬಿಸಿವೆ. ವಿಶಿಷ್ಟ ಕಟ್ಟಿಗೆಗಳಿಂದ ಟೆನಿಸ್ ಬ್ಯಾಟು, ಹಾಕಿ ಸ್ಟಿಕ್, ಸ್ಟಂಪ್ಸ ಮೊದಲಾದ ಕ್ರೀಡಾ ಸಾಮಗ್ರಿಗಳನ್ನು ತಯಾರಿಸಲಾಗುತ್ತಿದೆ. ಗೃಹ ನಿರ್ಮಾಣ ಹಾಗೂ ಮೇಜು, ಖುರ್ಚಿ ಮುಂತಾದ ಪೀಠೋಪಕರಣಗಳ ತಯಾರಿಕೆಯಲ್ಲಿ ಬರುವ ಸುಮಾರು ೩೦೦೦ ಜಾತಿಯ ಮರಗಳು ನಮ್ಮ ಅರಣ್ಯಗಳಲ್ಲಿವೆ ಎಂಬುದಾಗಿ ಅರಣ್ಯಶಾಖೆಯವರು ಲೆಕ್ಕ ಹಾಕಿದ್ದಾರೆ. ಅರಣ್ಯಗಳಲ್ಲಿ ದೊರೆಯುವ ಗಂಧ, ತೇಗು, ಮತ್ತಿ, ಬೀಟೆ, ನಂದಿ, ಹೊನ್ನೆ ಹಾಗೂ ಮತ್ತಿತರ ಮರಗಳು, ಬಿದಿರುಗಳು, ಸೌದೆ, ಇದ್ದಿಲು, ದನ-ಕರುಗಳಿಗೆ ಮೇವು ಮುಂತಾದವುಗಳು ಇಲ್ಲದೆ ನಮ್ಮ ನಿತ್ಯ ಜೀವನ ನಡೆಯಲಾರದು. ಅಮೂಲ್ಯವಾದ ಗಿಡಮೂಲಿಕೆ (ಔಷಧ ಸಸ್ಯ) ದೊರೆಯುವುದು ಅರಣ್ಯಗಳಲ್ಲಿಯೇ. ಭಾರತದಲ್ಲಿ ಸುಮಾರು ೧೫೦೦ ಕ್ಕೂ ಮೇಲ್ಪಟ್ಟು ಸಂಖ್ಯೆಯ ಔಷಧ ಸಸ್ಯಗಳಿವೆ. ಹಿಮಾಲಯದ ಪೂರ್ವ ಮತ್ತು ಪಶ್ಚಿಮ ಪ್ರದೇಶಗಳು ಈ ಸಸ್ಯಗಳ ಸ್ವಾಭಾವಿಕ ಆವಾಸಗಳು. ಆದರೆ ಈಗ ಪ್ರಾಯೋಗಿಕವಾಗಿ ಬಹಳಷ್ಟು ಕಡೆ ಇವುಗಳ ವ್ಯವಸಾಯ ನಡೆಯುತ್ತಿದೆ ಹಾಗೂ ದೇಶದ ಪ್ರಮುಖ ವೈದ್ಯಕೀಯ ಸಂಸ್ಥೆಗಳು ಇಂಥ ಔಷಧ ಸಸ್ಯಗಳ ಬಗೆಗೆ ಸಂಶೋಧನೆ ನಡೆಸುತ್ತಿವೆ. ಅಶ್ವಗಂಧಿ (ಹಿರಿಮದ್ದಿನ ಗಿಡ), ಅಡುಸೋಗೆ, ಒಂದೆಲಗ, ಕುಪ್ಪಿಗಿಡ, ಗಂಧದ ಮರ.

ತುಳಸಿ, ನೆಗ್ಗಿಲುಮುಳ್ಳು, ಬೆಲಡೋನ, ಸರ್ಪಗಂಧಿ, ನಂಜಿನ ಕೊರಡು (ನಕ್ಸ್ ವಾಮಿಕ್), ಸಿಂಕೋನ, ಫಾಕ್ಸ ಗ್ಲೋವ್, ಗಜಗಜಗಿಡ, ಕ್ಯಾರೇವ್, ನೀಲಗಿರಿ, ಕೊಡಸೀಗ ಮುಂತಾದವು ನಮ್ಮ ದೇಶದ ಮುಖ್ಯವಾದ ಔಷಧೀಯ ಸಸ್ಯಗಳು. ಆಧುನಿಕ ಔಷಧ ಕೈಗಾರಿಕೆಯಲ್ಲಿ ಔಷಧೀಯ ಸಸ್ಯಗಳಿಗೆ ಬಹಳ ಮಹತ್ವವಿದೆ.

ನಮ್ಮ ಅರಣ್ಯದ ಹುಟ್ಟುವಳಿಗಳು ವಿದೇಶಿ ವ್ಯಾಪಾರದಲ್ಲೂ ಪಾಲ್ಗೊಳ್ಳುತ್ತಲಿವೆ. ಯುರೋಪಿನ ಮಾರುಕಟ್ಟೆಗಳಲ್ಲಿ ನಮ್ಮ ದೇಶದ ಟಿಂಬರ ಕಟ್ಟಿಗೆಗಳಿಗೆ ಒಳ್ಳೆಯ ಮಾರುಕಟ್ಟೆ ಇದೆ. ಅರಗು, ರಾಳ, ಟರ್ಪೆಂಟೈನ್ ಎಣ್ಣೆ, ಗಂಧದ ಎಣ್ಣೆ, ಗಿಡಮೂಲಿಕೆಗಳು ಮುಂತಾದವುಗಳನ್ನು ಭಾರತ ಇಂದು ಬ್ರಿಟನ್, ಅಮೇರಿಕ, ಆಸ್ಟ್ರೇಲಿಯ, ಪಶ್ಚಿಮ ಜರ್ಮನಿ, ಸಿಲೋನ ಮುಂತಾದ ದೇಶಗಳಿಗೆ ನಿರ್ಯಾತಿಸುತ್ತಲಿದೆ. ಸದ್ಯ ಪ್ರತಿವರ್ಷ ಸುಮಾರು ೨೨.೬ ಕೋಟಿ ರೂಪಾಯಿ ಮೌಲ್ಯದ ಅರಣ್ಯೋತ್ಪತ್ತಿ ( ಫಾರೆಸ್ಟ ಪ್ರೊಡಕ್ಟ್ಸ ) ಗಳನ್ನು ವಿದೇಶಗಳಿಗೆ ನಿರ್ಯಾತಿಸಲಾಗುತ್ತಿದೆ. ಹಾಗೂ ಪರದೇಶಗಳಿಂದ ಸುಮಾರು ೩೯ ಕೋಟಿ ರೂಪಾಯಿ ಮೌಲ್ಯದ ವನ್ಯಜನಿತ ವಸ್ತುಗಳಿಂದ ತಯಾರಿಸಿದ ಸರಕುಗಳನ್ನು ( ಕಾಗದ, ರಬ್ಬರ ಇತ್ಯಾದಿ ) ಆಮದು ಮಾಡಿಕೊಳ್ಳುತ್ತಲಿದ್ದೇವೆ. ಮುಂದಿನ ಹತ್ತು ವರುಷಗಳೊಳಗಾಗಿ ದೇಶದ ಅರಣ್ಯೋದ್ಯಮ ಸ್ವಾವಲಂಬನೆ ಹೊಂದಿ ಪ್ರತಿವರುಷ ೮೦ ಕೋಟಿ ರೂಪಾಯಿ ಮೌಲ್ಯದ ಅರಣ್ಯಜನಿತ

ವಸ್ತುಗಳಿಂದ ತಯಾರಿಸಿದ ಸರಕುಗಳನ್ನು ನಿರ್ಯಾತ ಮಾಡುವ ಸಾಮರ್ಥ್ಯವನ್ನು ನಮ್ಮ ಅರಣ್ಯಗಳಿಂದ ಪಡೆದುಕೊಳ್ಳ ಬಹುದು ಎಂಬುದು ನಮ್ಮ ಅರಣ್ಯ ಇಲಾಖೆಯವರ ಆಶಯ. ಆಶಯ ಸ್ತುತ್ಯವಾದುದೇ. ಸ್ತುತ್ಯ ಸತ್ಯವಾಗಬೇಕು. ಈ ದಿಶೆಯಲ್ಲಿ ಸೂಕ್ತ ಕಾರ್ಯನಿರ್ವಹಣೆ ಅವಶ್ಯ. ನಿರ್ಯಾತ ವನ್ನು ಹೆಚ್ಚಿಸುವ ಹಂಬಲಿನಲ್ಲಿ ವಿಪಿನೋದ್ಧಾರವನ್ನೂ ಅಲಕ್ಷಿಸುವಂತಿಲ್ಲ.

ಪ್ರತ್ಯಕ್ಷ ಉಪಯುಕ್ತತೆಯಷ್ಟೇ ಅರಣ್ಯಗಳ ಪರೋಕ್ಷ ಪ್ರಯೋಜನಗಳೂ ಇವೆ. ಅರಣ್ಯ ಪರಿಸರವಿದ್ದಲ್ಲಿ ಸೊಗಸಾದ ಬೆಳೆ ಬರುತ್ತದೆ ಸ್ಥಳೀಯ ಹವೆ, ನೆಲ ಹಾಗೂ ಜಲದ ಮೇಲೆ ಅರಣ್ಯಗಳ ಪರೋಕ್ಷ ಪ್ರಭಾವ ಪರಿಣಾಮಕಾರಿ ಯಾಗಿರುತ್ತದೆ. ಅವು ಮೋಡಗಳನ್ನಾಕರ್ಷಿಸಿ ಮಳೆ ತರು ವವು. ಅರಣ್ಯಗಳು ಹೇಗೆ ಮಳೆ ಬೀಳುವದನ್ನು ನಿಯಂತ್ರಿಸು ತ್ತವೆ ಎಂಬುದು ಇನ್ನೂ ಸರಿಯಾಗಿ ಅರ್ಥವಾಗಿಲ್ಲವಾದರೂ ಕೆಲವು ಕಡೆ ಅರಣ್ಯ ಮೂಲೋತ್ಪಾಟನೆಯ ನಂತರ ಮಳೆಯ ಗತಿ ಬದಲಾಯಿಸಿದ್ದಕ್ಕೆ ಆಧಾರಗಳಿವೆ. ಅರಣ್ಯಗಳು ಗಾಳಿ, ಬಿಸಿಲುಗಳ ಉಗ್ರತೆಯನ್ನು ಕಡಿಮೆ ಮಾಡುತ್ತವೆ. ಮಾನವನಿಗೆ ದೈಹಿಕ ಮತ್ತು ಮಾನಸಿಕ ರಂಜನೆಗಳನ್ನು ಕಲ್ಪಿಸುತ್ತವೆ. ಅವು ರಾಷ್ಟ್ರೀಯ ಸಂಪತ್ತನ್ನು ವರ್ಧಮಾನ ಮಾಡುವದಲ್ಲದೆ ರಾಷ್ಟ್ರದ ಪ್ರಾಕೃತಿಕ ಆರೋಗ್ಯ ಮತ್ತು ಸುಸ್ಥಿತಿಗೆ ಕಾರಣ ವಾಗಿವೆ. ದೇಶದ ಅನೇಕ ಭಾಗಗಳಲ್ಲಿ ಹವಾಮಾನ ವಿಷ

ಮತೆಯುಂಟಾಗಿರುವದು ಯಾವ ಹಿಡಿತವೂ ಇಲ್ಲದ ಅರಣ್ಯಗಳ ಮೂಲೋತ್ಪಾಟನೆ ಮಾಡುವದರಿಂದಲೇ ಆಗಿದೆ. ನೀರಿನ ಸೆಳೆತದಿಂದ, ಗಾಳಿಯ ಹೊಡೆತದಿಂದ ಸಂಭವಿಸುವ ಭೂಸವಕಳಿಯನ್ನು ಅರಣ್ಯಗಳು ಕಡಿಮೆ ಮಾಡುತ್ತವೆ. ಇಳಿಜಾರು ಪ್ರದೇಶಗಳಲ್ಲಿ ಅರಣ್ಯಗಳು ಕೃಷಿಯೋಗ್ಯವಾದ ಜಮೀನುಗಳನ್ನು ಅತಿವೃಷ್ಟಿಯಿಂದಾಗುವ ಭೂಸವೆತದಿಂದ ರಕ್ಷಿಸುತ್ತವೆ. ಮಣ್ಣಿನ ಫಲವಂತಿಕೆಯನ್ನು ಅವು ಹೆಚ್ಚಿಸುವವು. ಕೊಳೆಯುವ ಪರ್ಣಗಳು (ಸೊಪ್ಪಿನ ಗೊಬ್ಬರ) ಒಳ್ಳೆಯ ಕ್ಷಾರಗಳನ್ನು ಪೂರೈಸುತ್ತವೆ. ಭೂಮಿಯಲ್ಲಿ ನೀರಿನ ಪಸಿ ಅಳಿಯದೆ ಉಳಿದಿರಲು ಅರಣ್ಯಗಳ ನೆರವು ಅಗತ್ಯ. ಇದ್ದ ಕಾಡನ್ನು ಕಡಿಯುವದೊಂದನ್ನೇ ಮಾಡಿ ಹೊಸ ಕಾಡನ್ನು ಬೆಳೆಸದಿದ್ದರೆ ವಾರ್ಷಿಕ ಮಳೆ ಮಂದವಾಗಿ ಸವಕಳಿಯಿಂದ ಕ್ರಮಶಃ ಕಾಡು ಮರಭೂಮಿಯಾಗುವದು. ಮೆಸಪೊಟೇಮಿಯಾ ಒಂದಾನೊಂದು ಕಾಲದಲ್ಲಿ ಉಜ್ವಲ ನಾಗರಿಕತೆಯ ತವರೂರಾಗಿತ್ತು. ಇಂದು ಅದೊಂದು ಮರಳುಕಾಡು. ಟೈಗ್ರಿಸ್ ಮತ್ತು ಯುಫ್ರೆಟಿಸ್ ನದೀ ತೀರಗಳಲ್ಲಿನ ಪ್ರಾರಂಭಿಕ ನಾಗರಿಕತೆಗಳ ಅವನತಿಗೆ "ಮರುಭೂಮಿಯ ಮುನ್ನಡೆ"ಯೇ ಮುಖ್ಯ ಕಾರಣವಾಗಿದೆ. ಎಷ್ಟೋ ಅರಬದೇಶಗಳು ಕಾಡನ್ನು ಕಡಿದು, ದನಕರುಗಳನ್ನು ಮೇಯಿಸಿ ತಮ್ಮ ನಾಡನ್ನು ಮರಭೂಮಿಯನ್ನಾಗಿ ಮಾಡಿಕೊಂಡಿವೆ. ನಮ್ಮ ದೇಶದ ರಾಜಸ್ಥಾನವೂ ಇದಕ್ಕೆ ಹೊರತಾಗಿಲ್ಲ. ವರ್ಷಂಪ್ರತಿ ೩೭ ಸಾವಿರ ಎಕರೆಗಳಷ್ಟು ವಿಸ್ತಾರದ ಪ್ರದೇಶವು ಮರುಭೂಮಿಯಾಗಿ ಮಾರ್ಪಡುತ್ತಿರುವ ಥಾರದ

ಹರಡುವಿಕೆ ತಡೆಯಲು ಮರಗಳನ್ನು ಬೆಳೆಸುವುದಲ್ಲದೆ ಬೇರೆ ಮಾರ್ಗವಿಲ್ಲವೆಂದು ವಿಜ್ಞಾನಿಗಳು ಎಚ್ಚರಿಕೆ ಇತ್ತಿದ್ದಾರೆ. ವನದೇವಿ ರಕ್ಷಕಳೂ ಹೌದು, ಉತ್ಪಾದಕಳೂ ಹೌದು.

## ಕೋಷ್ಟಕ ೨
## ಭಾರತದ ಅರಣ್ಯ ಕ್ಷೇತ್ರ

| ರಾಜ್ಯಗಳು/ ಕೇಂದ್ರಾಡಳಿತ ಪ್ರದೇಶಗಳು | ಭೂ ಕ್ಷೇತ್ರ | ಅರಣ್ಯ ಕ್ಷೇತ್ರ [ಲಕ್ಷ ಹೆಕ್ಟೇರುಗಳಲ್ಲಿ] | ಭೂ ಕ್ಷೇತ್ರ ಶೇಕಡಾ |
|---|---|---|---|
| ಆಂಧ್ರಪ್ರದೇಶ........ | ೨೭೬.೩೪ | ೬೬.೫೧ | ೨೪.೨ |
| ಅಸ್ಸಾಂ............ (ಮೇಘಾಲಯ ಸಹಿತ) | ೧೨೧.೯೭ | ೪೫.೬೫ | ೩೭.೪ |
| ಬಿಹಾರ............ | ೧೭೪.೦೧ | ೩೦.೮೫ | ೧೭.೭ |
| ಗುಜರಾತ್........ | ೧೮೭.೦೯ | ೧೯.೫೦ | ೧೦.೪ |
| ಹರಯಾನಾ........ | ೦೪೩.೮೦ | ೦೧.೩೬ | ೦೩.೧ |
| ಹಿಮಾಚಲಪ್ರದೇಶ | ೦೫೬.೦೦ | ೨೧.೬೫ | ೩೮.೭ |
| ಜಮ್ಮು ಮತ್ತು ಕಾಶ್ಮೀರ.......... | ೨೨೨.೮೬ | ೨೦.೮೧ | ೦೯.೩ |
| ಕೇರಳ............ | ೦೩೮.೮೭ | ೧೦.೪೧ | ೨೬.೮ |
| ಮಧ್ಯಪ್ರದೇಶ.... | ೪೪೩.೪೬ | ೧೭೩.೯೯ | ೩೯.೦ |

| | | | |
|---|---|---|---|
| ಮಹಾರಾಷ್ಟ್ರ........ | ೩೦೭.೨೭ | ೬೬.೮೬ | ೨೧.೮ |
| ಮಣಿಪುರ............ | ೨೨.೩೫ | ೦೬.೦೨ | ೨೬.೯ |
| ಮೈಸೂರು........ (ಈಗ ಕರ್ನಾಟಕ) | ೧೯೧.೭೬ | ೩೫.೨೦ | ೧೮.೪ |
| ನಾಗಾಲ್ಯಾಂಡ........ | ೧೬.೪೯ | ೦೩.೧೦ | ೧೮.೮ |
| ಓರಿಸ್ಸಾ............ | ೧೫೫.೮೬ | ೬೮.೧೬ | ೪೩.೭ |
| ಪಂಜಾಬ............ | ೫೦.೫೦ | ೦೧.೮೮ | ೦೩.೭ |
| ರಾಜಸ್ತಾನ........ | ೩೪೨.೨೭ | ೩೭.೬೪ | ೧೧.೦ |
| ತಮಿಳುನಾಡು | ೧೨೯.೯೭ | ೨೨.೧೮ | ೧೭.೧ |
| ತ್ರಿಪುರ... ............ | ೧೦.೪೫ | ೦೬.೩೩ | ೬೦.೩ |
| ಉ.ಪ್ರದೇಶ........ | ೨೯೪.೩೬ | ೪೫.೭೧ | ೧೫.೫ |
| ಪ.ಬಂಗಾಲ... .... | ೮೭.೬೭ | ೧೧.೮೩ | ೧೩.೫ |
| ದಿಲ್ಲಿ................ | ೦೧.೪೮ | ೦೦.೦೫ | ೦೩.೪ |
| ಗೋವಾ, ದಮನ ಮತ್ತು ದೀವ........ | ೦೩.೭೩ | ೦೧.೦೩ | ೨೭.೬ |
| ಅರುಣಾಚಲಪ್ರದೇಶ | ೮೧ ೪೩ | ೫೧.೫೪ | ೬೩.೩ |
| ಅಂದಮಾನ ಮತ್ತು ನಿಕೋಬಾರ........ | ೦೮.೨೯ | ೦೬.೩೫ | ೭೬.೬ |
| | ೩೨೬೮.೦೯ | ೭೫೩.೫೧ | |

(Source: Yojana Vol. XVII. No.11.July 1, 1973)

ಕೋಷ್ಟಕ ೩

## ಮುಖ್ಯ ಅರಣ್ಯೋತ್ಪತ್ತಿಗಳು

| ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳು | ಮುಖ್ಯ ಅರಣ್ಯೋತ್ಪತ್ತಿಗಳು |
|---|---|
| ಆಂಧ್ರಪ್ರದೇಶ ... .... | ಟಿಂಬರ, ಬಿದಿರು, ಕೇಸರಿಕೆ ಮರ (Casuarina) |
| ಆಸಾಮು........... | ಟಿಂಬರ, ಬಿದಿರು, ಗಿಡಮೂಲಿಕೆಗಳು |
| ಬಿಹಾರ........... | ಟಿಂಬರ, ಬಿದಿರು, ಕೆಂದು (Kendu) ಎಲೆಗಳು, ಅರಗು, ರಾಳ, ಅಂಟು. |
| ಗುಜರಾತ್........... | ಟಿಂಬರ, ಬಿದಿರು |
| ಹರಯಾನಾ............ | ಮರಮುಟ್ಟು |
| ಹಿಮಾಚಲಪ್ರದೇಶ ... | ಟಿಂಬರ, ಉರುವಲ ಕಟ್ಟಿಗೆ, ಅಂಟು ರಾಳ, ಗಿಡಮೂಲಿಕೆಗಳು |
| ಜಮ್ಮು ಮತ್ತು ಕಾಶ್ಮೀರ............... | ರಾಳ, ಅಂಟು, ರೇಷ್ಮೆ, ಟಿಂಬರು |
| ಕೇರಳ............... | ಟಿಂಬರ, ಬಲಾರದಮರ (ಎಬನಿ), ಮೆದುಕಟ್ಟಿಗೆ, ರೋಸವುಡ್, ಗಂಧದ ಮರ. |
| ಮಧ್ಯಪ್ರದೇಶ ....... | ಖನಿಜ ಸಂಬಂಧ ಉತ್ಪನ್ನಗಳು, ಬಿದಿರು. |

ಮಹಾರಾಷ್ಟ್ರ........... ರೇಷ್ಮೆ, ಟಿಂಬರ.

ಮಣಿಪುರ ... ........ ಬಿದಿರು.

ಮೈಸೂರು.......... ಗಂಧದ ಮರ, ಬಿದಿರು, ಮಿದುಕಟ್ಟಿಗೆ,
(ಈಗ ಕರ್ನಾಟಕ) ಟಿಂಬರ, ಉರುವಲ ಕಟ್ಟಿಗೆ.

ನಾಗಾಲ್ಯಾಂಡ........ ಟಿಂಬರ.

ಓರಿಸ್ಸಾ............... ಟಿಂಬರ, ಬಿದಿರು, ಉರುವಲ ಕಟ್ಟಿಗೆ,
ಕೆಂದು ಎಲೆಗಳು, ಅರಗು, ಗಿಡ–
ಮೂಲಿಕೆ, ಸಾಲ (Sal) ಬೀಜಗಳು

ಪಂಜಾಬ.............. ಮರಮುಟ್ಟು, ಉರುವಲಕಟ್ಟಿಗೆ.

ರಾಜಸ್ಥಾನ........... ಖನಿಜ ಸಂಬಂಧ ಉತ್ಪನ್ನಗಳು,
ಮರಮುಟ್ಟು.

ತಮಿಳುನಾಡು........ ಟಿಂಬರ, ಗಂಧದಕಟ್ಟಿಗೆ, ಮಿದುಕಟ್ಟಿಗೆ

ತ್ರಿಪುರಾ ............... ಬಿದಿರು, ನೀಲಗಿರಿ (Eucalyptus)

ಉತ್ತರ ಪ್ರದೇಶ ....... ಮರಮುಟ್ಟು.

ಪಶ್ಚಿಮ ಬಂಗಾಲ.... ಟಿಂಬರ, ಜೇನುತುಪ್ಪ, ಉರುವಲ
ಕಟ್ಟಿಗೆ, ಬಿದಿರು.

ದಿಲ್ಲಿ .................... ಗಿಡಮೂಲಿಕೆ, ಮರಮುಟ್ಟು.

ಗೋವಾ, ದಮನ,
ದೀವ...................... ಖನಿಜ ಸಂಬಂಧ ಉತ್ಪನ್ನಗಳು,
ಟಿಂಬರ, ಗೇರು.

ಅರುಣಾಚಲಪ್ರದೇಶ....ಟಿಂಬರ.

ಅಂದಮಾನ,
ನಿಕೋಬಾರ............ ಟಿಂಬರ, ಬಿದಿರು.

ಕೋಷ್ಟಕ ೪

**ಔದ್ಯಮಿಕ ಮರ ( ಇಂಡಸ್ಟ್ರಿಯಲ್ ವುಡ್ ) ಮತ್ತು ಉರುವಲ ಕಟ್ಟಿಗೆಯ ಉತ್ಪಾದನೆ.**

| ವರ್ಷ | ಔದ್ಯಮಿಕ ಮರಮುಟ್ಟು | ಉರುವಲ ಕಟ್ಟಿಗೆ | ಒಟ್ಟು ಮೌಲ್ಯ |
|---|---|---|---|
| | (ದಶಲಕ್ಷ ಕ್ಯೂಬಿಕ್ ಮೀಟರು ಗಳಲ್ಲಿ) | | (ಕೋಟಿ ರೂಪಾಯಿ ಗಳಲ್ಲಿ ) |
| ೧೯೬೦–೬೧ | ೫.೪೩ | ೧೧.೬೪ | ೪೮.೫ |
| ೧೯೬೭–೬೮ | ೮.೭೩ | ೧೨.೬೫ | ೭೪.೪ |
| ೧೯೬೮–೬೯ | ೯.೬೦ | ೧೧.೭೩ | ೮೧.೫ |
| ೧೯೬೯–೭೦ | ೮.೮೯ | ೧೩.೨೭ | ೮೮.೫ |

## ಕೋಷ್ಟಕ ೫

## ಅಪ್ರಮುಖ ಫಸಲು ಉತ್ಪಾದನೆಯ ಮೌಲ್ಯ

( ಕೋಟಿ ರೂಫಾಯಿಗಳಲ್ಲಿ )

| ವರ್ಷ | ಬಿದಿರು | ಇತರ ಫಸಲುಗಳು | ಒಟ್ಟು |
|---|---|---|---|
| ೧೯೬೦–೬೧ | ೧.೭ | ೯.೪ | ೧೧.೧ |
| ೧೯೬೭–೬೮ | ೩.೨ | ೨೯.೦ | ೩೨.೨ |
| ೧೯೬೮–೬೯ | ೩.೮ | ೩೨.೭ | ೩೬.೫ |
| ೧೯೬೯–೭೦ | ೪.೬ | ೩೧.೫ | ೩೬.೧ |

Source : India 1973. Publication Division, Government of India.

ನಮ್ಮ ದೇಶದಲ್ಲಿಯ ವಿಪಿನ ವಿಸ್ತಾರ ೭೫೩.೫೧ ಲಕ್ಷ ಹೆಕ್ಟೇರುಗಳು. ನಮ್ಮ ಅರಣ್ಯಾವೃತ ಪ್ರದೇಶವು ಅಂತರ ರಾಷ್ಟ್ರೀಯ ಪ್ರಮಾಣ (೩೩)ಕ್ಕಿಂತ ಶೇಕಡಾ ೯ರಷ್ಟು ಕಡಿಮೆ ಇದೆ. ಇಷ್ಟೇ ಅಲ್ಲದೆ ವಿವಿಧ ಪ್ರದೇಶಗಳಲ್ಲಿ ಅವುಗಳ ಹರಹು ಒಂದೇ ಸಮನಾಗಿಲ್ಲ. (ನೋಡಿ– ಕೋಷ್ಟಕ ೨) ಉದಾಹರಣೆಗಾಗಿ ಅಂದಮಾನ ನಿಕೋಬಾರ ನಡುಗಡ್ಡೆಗಳಲ್ಲಿ ಶೇಕಡಾ ೭೬.೬ರಷ್ಟು ಪ್ರದೇಶವು ವನ್ಯಾಚ್ಛಾದಿತವಾಗಿದ್ದರೆ ಜಮ್ಮು ಮತ್ತು ಕಾಶ್ಮೀರ ಹಾಗೂ ಹರಯಾನಾ ರಾಜ್ಯಗಳಲ್ಲಿ ಇವುಗಳ ಪ್ರಮಾಣ ಕ್ರಮವಾಗಿ ಶೇಕಡಾ ೯.೩ ಹಾಗೂ ೩.೧

ಇವೆ. ಭೂಗುಣ ಹವಾಗುಣ ಇವೇ ಮುಂತಾದ ಪ್ರಕೃತಿ ಔದಾರ್ಯವೂ ಇವಕ್ಕೆ ಕಾರಣವಾಗಬಹುದು. ಇಷ್ಟೇ ಅಲ್ಲದೆ ಆಯಾ ರಾಜ್ಯಗಳ ಅರಣ್ಯ ಧೋರಣೆಯೂ ಅರಣ್ಯ ವಿಸ್ತಾರವನ್ನು ವಿಸ್ತರಿಸಲು ಅಥವಾ ಮೊಟಕುಗೊಳಿಸಲು ಕಾರಣವಾಗಬಹುದು. ಉದಾಹರಣೆಗಾಗಿ ಆಸಾಮ ಮತ್ತು ಗುಜರಾತ್ ರಾಜ್ಯಗಳ ಅರಣ್ಯಗಳ ಕೆಲಭಾಗವನ್ನು ೧೯೬೮-೬೯ರಲ್ಲಿ ಸಾಗುವಳಿಗೆ ಬಿಡುಗಡೆ ಮಾಡಿದ್ದರಿಂದ ಅಲ್ಲಿಯ ಅರಣ್ಯಾವೃತ ಪ್ರದೇಶವು ಕೆಲಮಟ್ಟಿಗೆ ಮೊಟಕಾಗಿದೆ.

### ಕೋಷ್ಟಕ ೬

### ಭಾರತದ ಅರಣ್ಯ ವಿಸ್ತಾರ
(ದಶಲಕ್ಷ ಹೆಕ್ಟೇರುಗಳಲ್ಲಿ)

| ವಿವರಣೆ | ೧೯೬೦-೬೧ | ೧೯೬೭-೬೮ | ೧೯೬೮-೬೯ | ೧೯೬೯-೭೦ |
|---|---|---|---|---|
| ೧ ಉತ್ಪಾದನಾ ದೃಷ್ಟಿಯಿಂದ | | | | |
| ವಾಣಿಜ್ಯಾರ್ಹ | ೪೬.೫೦ | ೪೪.೨೭ | ೪೫.೩೪ | ೪೫.೫೮ |
| ದಟ್ಟಡವಿ | ೧೦.೦೨ | ೧೩.೫೭ | ೧೨.೮೧ | ೧೪.೭೬ |
| ಇತರ | ೧೦.೨೭ | ೧೭.೪೫ | ೧೬.೪೨ | ೧೮.೬೯ |
| ಒಟ್ಟು | ೬೮.೯೬a | ೭೫.೨೯ | ೭೪.೭೭ | ೭೫.೦೩ |

| | | | | |
|---|---|---|---|---|
| **೨ ಶಾಸನ ಸಮ್ಮತ ಸ್ಥಿತಿಯ ಪ್ರಕಾರ** | | | | |
| ಕಾಯ್ದಿರಿಸಿದ್ದು | ೩೧.೬೧ | ೩೫.೪೦ | ೩೫.೬೦ | ೩೮.೦೭ |
| ರಕ್ಷಿತ | ೨೪.೦೬ | ೨೪.೭೪ | ೨೪.೭೩ | ೨೪.೪೫ |
| ಅವರ್ಗೀಕರಣ | ೧೧.೨೧ | ೧೨.೬೨ | ೧೧.೪೯ | ೧೨.೫೧ |
| ಒಟ್ಟು | ೬೮.೯೬a | ೭೫.೨೯b | ೭೪.೭೭c | ೭೫.೦೩ |
| **೩ ಉಪಭೋಗದಿಂದ** | | | | |
| ಅ) ಮಿಡು ಮರಗಳು | ೪.೪೩ | ೪.೪೬ | ೩.೪೧ | ೪.೧೮ |
| ಬ) ಅಗಲ ಎಲೆಯದು | ೬೪.೫೩ | ೭೦.೩೪ | ೭೧.೩೬ | ೭೦.೮೫ |
| ಸಾಲ | ೧೧.೩೫ | ೧೧.೭೪ | ೧೧.೮೭ | ೧೧.೩೦ |
| ಟೀಕ | ೮.೭೫ | ೯.೭೫ | ೯.೬೨ | ೭.೩೪ |
| ಇತರ | ೪೪.೪೩ | ೪೮.೮೫ | ೪೯.೮೭ | ೫೨.೨೧ |
| ಅ+ಬ ಸೇರಿಸಿ ಒಟ್ಟು | ೬೮.೯೬ | ೭೫.೨೯d | ೭೪.೭೭ | ೭೫.೦೩ |

a ವಿವರ ಲಭ್ಯವಿರದ ೨.೦೮ ದಶಲಕ್ಷ ಹೆಕ್ಟೇರು ಅರಣ್ಯ ಪ್ರದೇಶವನ್ನು ಸೇರಿಸಿ

b ,, ,, ೨.೫೩ ,, ,, ,,

c ,, ,, ೨.೯೫ ,, ,, ,,

d ,, ,, ೦.೪೯ ,, ,, ,,

ಟಿಪ್ಪಣಿ ೧೯೬೮-೬೯ರಲ್ಲಿ ಅರಣ್ಯಾವೃತ ಪ್ರದೇಶ ಮೊಟಕಾಗಲು ಕಾರಣ ಆಸಾಮು ಮತ್ತು ಗುಜರಾತ್ ರಾಜ್ಯಗಳಲ್ಲಿ ಕೆಲಅರಣ್ಯ ಪ್ರದೇಶವನ್ನು ಸಾಗುವಳಿಗೆ ಬಿಡುಗಡೆ ಮಾಡಿದ್ದು.

Source : India 1973- Publication Division,
Govt. of India

## ಅರಣ್ಯಾಭಿವೃದ್ಧಿ ಕಾರ್ಯಕ್ರಮಗಳು

ದೇಶದ ಕೃಷಿ ಹಾಗೂ ಕೈಗಾರಿಕಾ ಕ್ಷೇತ್ರದಲ್ಲಿ ಅರಣ್ಯಗಳ ಪಾತ್ರವನ್ನು ಅರಿತು ಭಾರತ ಸರಕಾರವು ಅರಣ್ಯ ಸಂಪತ್ತನ್ನು ವೃದ್ಧಿಸಲು ಹಲವು ಯೋಜನೆಗಳನ್ನು ಹಮ್ಮಿಕೊಂಡಿದೆ. ಮನುಷ್ಯ ತನ್ನ ಹಂಗಾಮಿ ಲಾಭ, ಸೌಕರ್ಯ ಹಾಗೂ ಪ್ರಯೋಜನಗಳಿಗಾಗಿ ಅರಣ್ಯಗಳಿಗೆ ಉಂಟು ಮಾಡುತ್ತಿರುವ ಹಾನಿ ಅತಿಯಾಗುತ್ತ ಬಂದಿದೆ. ಇಂಥ ಹಾನಿಯಿಂದ ಅರಣ್ಯಗಳನ್ನು ರಕ್ಷಿಸಲು ಸರಕಾರ ವಿಶೇಷ ಅರಣ್ಯ ಶಾಸನಗಳನ್ನು ಜಾರಿಗೆ ತಂದಿದೆ. ಅವೆಂದರೆ ಅವರ್ಗೀಕೃತ ಅರಣ್ಯಗಳ ಪುನರುಜ್ಜೀವನ, ಅರಣ್ಯಗಳ ವೈಜ್ಞಾನಿಕ ಅಧ್ಯಯನ, ವರ್ಧನೆ, ಪೋಷಣೆ, ಸಂರಕ್ಷಣೆ, ಅರಣ್ಯಗಳಿಂದ ಪರಮಾವಧಿ ಪ್ರಯೋಜನಗಳನ್ನು ಸರ್ವದಾ ಹೊಂದುವ ವಿಧಾನಗಳು ಹಾಗೂ ಅವುಗಳ ವೈಜ್ಞಾನಿಕ ಆಡಳಿತೆಯ ಏರ್ಪಾಟು, ವನ್ಯಮೃಗ ರಕ್ಷಣೆ, ಅರಣ್ಯಮಾರ್ಗಗಳು, ಹುಲ್ಲುಗಾವಲುಗಳನ್ನು ವ್ಯವಸ್ಥಿತವಾಗಿ ನೋಡಿಕೊಳ್ಳುವದು ಇವೇ ಮುಂತಾದವು. ಅರಣ್ಯ ಶಾಖೆಯ ಕಾರ್ಯವ್ಯಾಪ್ತಿಯಲ್ಲಿ ಬರುವ ಮುಖ್ಯಾಂಶಗಳು ವನ್ಯ

ಮೃಗ-ಪಕ್ಷಿಗಳ ನಾಶವನ್ನು ತಡೆಗಟ್ಟಲು ಅನೇಕ ಕಾಡುಗಳಲ್ಲಿ ಶಿಕಾರಿಯನ್ನು ಶಾಸನದ ಮೂಲಕ ನಿಷೇಧಿಸಲಾಗಿದೆ. ದೇಶದ ಜನತೆಗೆ ಅರಣ್ಯಗಳ ಆವಶ್ಯಕತೆ, ಉಪಯೋಗ ಇವುಗಳ ವಿಷಯದಲ್ಲಿ ಹೆಚ್ಚಿನ ಅರಿವು ಆಗುವಂತೆ ಮಾಡಲು, ದೇಶದ ಅರಣ್ಯ ಸಂಪತ್ತನ್ನು ಕ್ರಮಬದ್ಧವಾಗಿ ವರ್ಧಿಸಲು ೧೯೫೦ರಿಂದ "ವನಮಹೋತ್ಸವ" ಎಂಬ ರಾಷ್ಟ್ರೀಯ ಸಪ್ತಾಹವನ್ನು ಆಚರಿಸಲಾಗುತ್ತಿದೆ. ನಾಡು ಬೆಳೆದಂತೆ ಕಾಡು ಕಡಿಮೆಯಾಗುವುದು ಸಹಜವೇ. ಆದರೆ ಅರಣ್ಯದ ಅಗತ್ಯವನ್ನು ಮನುಷ್ಯ ತಿಳಿದಮೇಲೆ ಅದನ್ನು ಅಳಿಸದೆ ಉಳಿಸಿಕೊಳ್ಳಬೇಕಾಗಿದೆ. ಅದರ ವಿವರಗಳನ್ನೆಲ್ಲ ತಿಳಿದುಕೊಳ್ಳುವ ಹಾಗೂ ತಿಳಿಸಿಕೊಡುವ ದಿಕ್ಕಿನಲ್ಲಿ ಸಂಶೋಧನೆ ನಡೆಸುವ ಕೆಲಸ ಸಾಗಿದೆ. ವನ್ಯರಾಶಿಯನ್ನು ವಿಶಾಲಗೊಳಿಸಿ ವಿಪುಲಗೊಳಿಸಲು ನೆರವಾಗುವಲ್ಲಿ ಡೆಹರಾಡೂನ್, ಬೆಂಗಳೂರು ಹಾಗೂ ಕೊಯಮುತ್ತೂರುಗಳಲ್ಲಿ ಅರಣ್ಯಸಂಶೋಧನಾ ಕೇಂದ್ರಗಳಿವೆ. ೧೩೦೦ ಎಕರೆ ಪ್ರದೇಶ ವ್ಯಾಪಿಸಿರುವ ಆಧುನಿಕ ವೈಜ್ಞಾನಿಕ ತಳಹದಿಯ ಮೇಲೆ ನಿಂತ ಡೆಹರಾಡೂನಿನಲ್ಲಿರುವ ಅರಣ್ಯ ಸಂಶೋಧನ ಸಂಸ್ಥೆ ಒಂದು ಭವ್ಯ ಸಂಸ್ಥೆ. ಈ ಸಂಸ್ಥೆ ಹುಟ್ಟಿಕೊಂಡಿದ್ದು ೧೯೦೬ರಲ್ಲಾದರೂ ಇತ್ತೀಚಿನ ವರುಷಗಳಲ್ಲಿ ಇದರ ಕಾರ್ಯವ್ಯಾಪ್ತಿ ಹೆಚ್ಚಿದೆ. ಅರಣ್ಯಶಾಸ್ತ್ರದ ವಿಶಿಷ್ಟ ವಿಭಾಗಗಳ ಸಂಶೋಧನೆ ಹಾಗೂ ಅರಣ್ಯಾಧಿಕಾರಿಗಳಿಗೆ ಸೂಕ್ತ ತರಬೇತಿ ಕೊಡುವುದು ಈ ಸಂಸ್ಥೆಯ ಮುಖ್ಯೋದ್ದೇಶಗಳು. ಬಹು ಬೆಲೆಯುಳ್ಳ ಸಂಶೋಧನೆಗಳನ್ನು ಈ ಸಂಶೋಧನ ಸಂಸ್ಥೆಯು

ಮಾಡಿದೆ. ಕ್ರಿಮಿ-ಕೀಟಕ ರೋಗಗಳಿಂದ ಮನೆಕಟ್ಟಿಗೆ, ಬಿದಿರುಗಳನ್ನು ಕಾಪಾಡುವ ಪದ್ಧತಿಗಳನ್ನು ರೂಪಿಸಿದೆ. ಕಾಗದ, ಪ್ಲೈವುಡ್, ಅಂಟು, ತರ್ಪಣತೈಲ, ಸ್ಯಾಂಟೋನಿನ್ ಮುಂತಾದ ಸರಕುಗಳನ್ನು ಸಿದ್ಧಪಡಿಸಲು ದಾರಿತೋರಿದೆ. ಇಲ್ಲಿಯ ಸಂಶೋಧನೆಗಳ ವಿವರಗಳು ಉದ್ಯೋಗದಲ್ಲಿ ಹಿತ ಸಂಬಂಧ ವ್ಯಕ್ತಿಗಳಿಗೆ ಸಕಾಲದಲ್ಲಿ ಮುಟ್ಟುವ ಏರ್ಪಾಡಾಗುವುದು ಅವಶ್ಯ. ಕೊಯಮತ್ತೂರಿನಲ್ಲಿರುವ ಅರಣ್ಯ ಸಂಶೋಧನಾ ಸಂಸ್ಥೆ ಸ್ವಾತಂತ್ರ್ಯಾನಂತರ ಹುಟ್ಟಿದೆ. ಬೆಂಗಳೂರಿನ ಅರಣ್ಯ ಸಂಶೋಧನಾ ಸಂಸ್ಥೆ ೨–೧–೧೯೫೬ರಲ್ಲಿ ಮೈದಳೆದು ೨೦ ವರ್ಷಗಳ ನಂತರ ಅಂದರೆ ೨೬–೧೦–೧೯೭೬ರಲ್ಲಿ ಕೇಂದ್ರ ಸರಕಾರದ ವಶಕ್ಕೆ ಬಂದಿತು. ಒಂದು ತರಬೇತಿ ಕೇಂದ್ರವೂ ಇಲ್ಲಿದೆ. ರಾಜ್ಯದ ಸುಗಂಧ ಎಣ್ಣೆಗಳ ತಯಾರಿಕೆ, ಕಾಗದದ ತಯಾರಿಕೆ, ಗಂಧದ ಎಣ್ಣೆ ಕೈಗಾರಿಕೆ, ಪ್ಲೈವುಡ್ ಕೈಗಾರಿಕೆ ಮುಂತಾದವುಗಳಿಗೆಲ್ಲ ಈ ಸಂಸ್ಥೆ ಸಲ್ಲಿಸಿದ ಸೇವೆ ಗಮನಾರ್ಹವಾಗಿದೆ. ಸ್ಪೈಕ್ ಕಾಯಿಲೆ ಗಂಧದ ಮರಕ್ಕೆ ತಗಲುವ ದೊಡ್ಡ ಪಿಡುಗು. ಈ ಕಾಯಿಲೆಯನ್ನು ನಿಯಂತ್ರಿಸಲು ಎಫ್.ಎ.ಓ. ದೊಂದಿಗೆ ಕೆಲವು ಕಾರ್ಯಕ್ರಮಗಳನ್ನು ಈ ಸಂಸ್ಥೆ ಕೈಗೊಂಡಿದೆ. ಬಿದಿರನ್ನು ರೇಯಾನ್ ಪಲ್ಪ್ ಆಗಿ ಉಪಯೋಗಿಸಲು ಪ್ರಪ್ರಥಮತಃ ಭಾರತಕ್ಕೆ ತೋರಿಸಿಕೊಟ್ಟ ಹಿರಿಮೆ ಈ ಸಂಸ್ಥೆಯದಾಗಿದೆ. ಈ ಸಂಸ್ಥೆ ಮಾಡಿರುವ ಮತ್ತೊಂದು ಮಹತ್ವದ ಕೆಲಸವೆಂದರೆ ಔಷಧೋಪಯೋಗಿ ಗಿಡಮೂಲಿಕೆಗಳ ಕನ್ನಡದ ಹೆಸರನ್ನು ಸಂಗ್ರಹಿಸಿ ಅವಕ್ಕೆ ಲ್ಯಾಟಿನ್ ಹೆಸರುಗಳನ್ನು ನಿರ್ಧರಿಸಿ

ಆಯುರ್ವೇದೀಯ ವೈದ್ಯರಿಗೆ ಸಹಾಯಮಾಡಿರುವದು. ಈ ಅರಣ್ಯಸಂಶೋಧನ ಪ್ರಯೋಗಾಲಯ ಜರ್ಮನಿಯ ಮ್ಯೂನಿಚ್‌ನ (Munich) ಅರಣ್ಯಸಂಶೋಧನ ಪ್ರಯೋಗಾಲಯದ ಮಾದರಿಯಲ್ಲಿ ಸ್ಥಾಪಿತವಾಗಿದೆ.

ಅರಣ್ಯಗಳು ರಾಜ್ಯ ಸರಕಾರದ ಆಡಳಿತದಲ್ಲಿ ಬರುತ್ತಿದ್ದರೂ ಅರಣ್ಯಧೋರಣೆಯ ಸಂಬಂಧೀಕರಣಕ್ಕಾಗಿ ಕಣ್ಗಾರಿಕೆ ಇಡುವದು ರಾಷ್ಟ್ರೀಯ ಆರ್ಥಿಕ ವ್ಯವಸ್ಥೆಯ ದೃಷ್ಟಿಯಿಂದ ಕೇಂದ್ರ ಸರಕಾರದ ಅಗತ್ಯ ಕೆಲಸವಾಗಿದೆ. ಸಂಶೋಧನೆ ಮತ್ತು ಶಿಕ್ಷಣದ ಸರಿಯಾದ ವ್ಯವಸ್ಥೆಯೂ ಆಗಬೇಕು. ೧೯೫೦ರಲ್ಲಿ ಸೆಂಟ್ರಲ್ ಬೋರ್ಡ ಆಫ್ ಫಾರೆಸ್ಟ್ರಿ ಎಂಬ ಅರಣ್ಯಗಳ ಕೇಂದ್ರ ಸಮಿತಿಯನ್ನು ಸ್ಥಾಪಿಸಲಾಯಿತು. ೧೯೫೨ರಲ್ಲಿಯೇ ಭಾರತ ಸರಕಾರವು ಅರಣ್ಯಾಭಿವೃದ್ಧಿ ಧೋರಣೆಯನ್ನು ಪ್ರಕಟಿಸಿತು. ಇದಕ್ಕೆ ಅರಣ್ಯಧೋರಣೆ ಗೊತ್ತುವಳಿ ( ಫಾರೆಸ್ಟ್ ಪೊಲಿಸಿ ರಿಸೊಲ್ಯೂಶನ್ ) ಎಂದು ಹೆಸರು. ಈ ಧೋರಣೆಯ ಮುಖ್ಯಾಂಶಗಳು ಕೆಳಗಿನಂತಿವೆ:

೧) ಅರಣ್ಯಗಳ ಅಭಿವೃದ್ಧಿಗಾಗಿ ಕೆಲವು ಪ್ರದೇಶಗಳನ್ನು ಮೀಸಲಾಗಿಡುವದು. ಕೆಲವು ಕಾಡುಗಳನ್ನು ಕಡಿಯಬಾರದೆಂದೂ, ಅವುಗಳಲ್ಲಿಯ ವನ್ಯಮೃಗಗಳನ್ನು ನಾಶಗೊಳಿಸಬಾರದೆಂದೂ, ಅಲ್ಲಿ ಬೇಸಾಯ–ತೋಟಗಾರಿಕೆ ಮೊದಲಾದವುಗಳನ್ನು ಮಾಡಬಾರದೆಂದೂ ಸರಕಾರ ಕಟ್ಟಳೆ ವಿಧಿಸಿದೆ; ಅವು ಕಾಯ್ದಿರಿಸಿದ ಕಾಡುಗಳು ಎನಿಸಿಕೊಳ್ಳುತ್ತವೆ. ಕಾಡಿರುವ

ದೇಶದ ಆರ್ಥಿಕ ಪರಿಸ್ಥಿತಿಗೆ ನೆರವಾಗುತ್ತದೆ, ಊರಿನ ಹವೆಗೆ ಅನುಕೂಲವಾಗುತ್ತದೆ ಎನ್ನುವ ಕಲ್ಪನೆ ಇದಕ್ಕೆ ಮೂಲ.

೨) ಭೂ ಸವೆತ ಹಾಗೂ ಸಾಗರಮಣ್ಣಿನ ಆಕ್ರಮಣವನ್ನು ತಡೆಗಟ್ಟುವದು.

೩) ಹವಾಗುಣವನ್ನು ಉತ್ತಮಪಡಿಸುವದಕ್ಕಾಗಿ ಗಿಡಮರಗಳನ್ನು ನೆಡುವದು.

೪) ಹುಲ್ಲು ಮತ್ತು ಸೌದೆಯ ಸರಬರಾಜನ್ನು ಅಧಿಕಗೊಳಿಸುವ ಕಾರ್ಯಕ್ರಮಗಳನ್ನು ಕೈಗೊಳ್ಳುವದು.

೫) ಮರ ಮತ್ತು ಇನ್ನಿತರ ವನ್ಯಜನಿತ ವಸ್ತುಗಳ ಸರಬರಾಜನ್ನು ಹೆಚ್ಚಿಸಿ ಪರಮಾವಧಿ ವರಮಾನ ಬರುವಂತೆ ಮಾಡುವದು.

೬) ಅರಣ್ಯ ಹೀನ ಕ್ಷೇತ್ರಗಳನ್ನು ಪುನರುಜ್ಜೀವನಗೊಳಿಸುವದು.

ಮೇಲಿನ ಧೋರಣೆಗನುಗುಣವಾಗಿ ಅರಣ್ಯಾಭಿವೃದ್ಧಿ ಕಾರ್ಯಕ್ರಮಗಳಿಗಾಗಿ ಮೊದಲ ಮೂರು ಯೋಜನೆಗಳಲ್ಲಿ ವೆಚ್ಚ ಮಾಡಿದ ಮೊತ್ತ ಕ್ರಮವಾಗಿ ೯.೫, ೧೯.೩ ಹಾಗೂ ೫೧ ಕೋಟಿ ರೂಪಾಯಿಗಳು. ಅರಣ್ಯೋತ್ಪಾದನಾ ಸಾಮರ್ಥ್ಯವನ್ನು ಅಧಿಕಗೊಳಿಸುವದು, ಅರಣ್ಯಾಧಾರಿತ ಕೈಗಾರಿಕೆಗಳ ಅವಶ್ಯಕತೆಗಳನ್ನು ಲಕ್ಷಿಸಿ ಅರಣ್ಯಾಭಿವೃದ್ಧಿ ಯೋಜನೆಗಳನ್ನು

ಅನುಷ್ಠಾನಕ್ಕೆ ತರುವದು. ಅರಣ್ಯ ಶಾಸನವನ್ನು ಹೆಚ್ಚು ಬಿಗಿಗೊಳಿಸುವದು, ಪ್ರಾದೇಶಿಕ ಮಟ್ಟದಲ್ಲಿ ಅರಣ್ಯ ಸಂಶೋಧನಾ ಕ್ರಮಗಳನ್ನು ಕೈಕೊಳ್ಳುವದು, ಲಭ್ಯವಿರುವ ಅರಣ್ಯ ಸಂಪನ್ಮೂಲಗಳ ವಿವೇಕಪೂರ್ಣ ಬಳಕೆ, ಅರಣ್ಯ ಮಾರ್ಗಗಳ ರಚನೆ ಇವು ಚತುರ್ಥ ಪಂಚವಾರ್ಷಿಕ ಯೋಜನೆಯಲ್ಲಿಯ ಅರಣ್ಯ ಧೋರಣೆಯ ಮುಖ್ಯಾಂಶಗಳು. ಯೋಜನಾವಧಿಯಲ್ಲಿ ಅರಣ್ಯಾಭಿವೃದ್ಧಿಗೆ ಮೀಸಲಾಗಿಟ್ಟ ಮೊತ್ತ ೯೫.೫ ಕೋಟಿ ರೂಪಾಯಿಗಳು. ಅರಣ್ಯೋತ್ಪತ್ತಿಯಲ್ಲಿ ಸ್ವಾವಲಂಬನೆ ಸಾಧಿಸುವದರ ಜೊತೆಗೆ ಅವುಗಳ ನಿರ್ಯಾತವನ್ನು ಸಹ ಹೆಚ್ಚಿಸಲು ಅನುಕೂಲವಾಗುವ ಎಲ್ಲ ಕ್ರಮಗಳ ವಿಸ್ತೃತ ಅನುಷ್ಠಾನವೇ ಪಂಚಮ ಪಂಚವಾರ್ಷಿಕ ಯೋಜನಾ ಪಿತೃಗಳು ರೂಪಿಸಿರುವ ಅರಣ್ಯಧೋರಣೆಯ ಮುಖ್ಯ ಒಳಪಿಡಿ.

## ಅರಣ್ಯ ಸಂರಕ್ಷಣೆ

ಅರಣ್ಯಗಳನ್ನು ಮರಕ್ಕೆಂದೂ, ತನ್ನ ವಸತಿಗೆಂದೂ, ತನ್ನ ಅನುಕೂಲಕ್ಕೆಂದೂ ಮನುಷ್ಯ ನಾಶ ಮಾಡುವದಿದ್ದರೂ ಅರಣ್ಯ ಹಾಳಾಗುವದೆಲ್ಲವೂ ಹೀಗೆಯೇ ಎಂದು ಹೇಳಲು ಬರುವದಿಲ್ಲ. ಕಾಡ್ಗಿಚ್ಚು ಅರಣ್ಯದ ಮೊದಲನೆಯ ವೈರಿ. ಅದನ್ನು ಗೊತ್ತು ಹಚ್ಚಲು ಮತ್ತು ನಿಯಂತ್ರಿಸಲು ಒಂದು ದೊಡ್ಡ ಪಡೆಯೇ ಬೇಕು. ಕಾಡ್ಗಿಚ್ಚು ಅಂದರೆ ಬೆಂಕಿ ಕಾಡುಗಳನ್ನು ನೆಲಸಮ ಮಾಡಿ ಬಿಡುತ್ತದೆ. ಕೆಲವೊಮ್ಮೆ ಮನುಷ್ಯನೇ ಇದಕ್ಕೆ ಕಾರಣವಾಗಬಹುದು; ಅದೂ ಉದ್ದೇಶಪೂರ್ವಕ ವಿನಾಶಕಾರಿ

ಭಾವನೆಯಿಂದ ಅಥವಾ ಅಜಾಗರೂಕತೆಯಿಂದ ಆಗಬಹುದು ಹೇಮಂತ ಋತುವಿನಲ್ಲಿ ಗಿಡಮರಗಳು ಒಣಗಿ ನಿಂತು ಎಲೆಗಳೆಲ್ಲ ತರಕಾಗಿ ಉದುರಿದಾಗ ಬೆಂಕಿ ಹರಡುವದು ಸುಲಭ. ಗಾಳಿಯುದ್ದರಂತೂ ಕಾಡ್ಗಿಚ್ಚಿಗೆ ಶರವೇಗದ ಸಾಮರ್ಥ್ಯ. ಅನಲ–ಅನಿಲಗಳ ಸಂಮಿಲನ ಕಾಡಿಗೆ ಮೃತ್ಯು. "ಬೆಂಕಿ ಒಳ್ಳೇ ಆಳು ಆದರೆ ಕೆಟ್ಟ ಯಜಮಾನ" ಎನ್ನುವದಕ್ಕೆ ಕಾಡ್ಗಿಚ್ಚು ಉತ್ತಮ ನಿದರ್ಶನ. ಉಗಿಬಂಡಿಯೂ ಸಹ ಅರಣ್ಯಕ್ಕೆ ಆಪತ್ಕಾರಿ ಎಂಬುದು ಅರಣ್ಯ ಶಾಸ್ತ್ರಜ್ಞರ ಅಭಿಪ್ರಾಯ. ಉಗಿಬಂಡಿ ಅರಣ್ಯ ಪ್ರದೇಶಗಳಲ್ಲಿ ಹಾದು ಹೋಗುವಾಗ ಇಂಜಿನುಗಳು ಕಾರುವ ಕಿಡಿಗೂ ಕಾಡ್ಗಿಚ್ಚು ಕಾರಣವಾಗಬಹುದು. ಇದರ ಸಮರ್ಥನೆಗೆ ಉದಾಹರಣೆಗಳಿಲ್ಲದಿಲ್ಲ. ಇಂಗ್ಲಂಡ ದೇಶದ ಅರಣ್ಯಗಳಲ್ಲಿ ೧೯೫೦-೫೧ರಲ್ಲಿ ಸಂಭವಿಸಿದ ೧೩೨೭ ಕಾಡ್ಗಿಚ್ಚುಗಳಲ್ಲಿ ೧೦೪೩ ರೈಲಿನ ಓಡಾಟದಿಂದ ಉಂಟಾಯಿತೆಂದು ತಿಳಿಯಲಾಗಿದೆ. ಕಾಡ್ಗಿಚ್ಚುಗಳಿಂದ ಅರಣ್ಯಗಳನ್ನು ಸಂರಕ್ಷಿಸಲು ನಮ್ಮ ಅರಣ್ಯ ಇಲಾಖೆಯು ಕೈಗೊಳ್ಳುತ್ತಿರುವ ಕ್ರಮಗಳಲ್ಲಿ ಕೆಳಗಿನವು ಕೆಲವು:

೧) ಕಿಚ್ಚನ್ನು ತಡೆಯಲು ಬೆಂಕಿಶ್ರೋಟು ಹಾಕುವದು.

೨) ಬೆಂಕಿ ಹಿಡಿಯಬಹುದಾದ ವನ್ಯ ಪ್ರದೇಶಗಳನ್ನು ಮೊದಲೇ ಗುರುತಿಸಿ ಅಲ್ಲಿ ನಿಯಂತ್ರಿತವಾದ ಬೆಂಕಿ ಹಾಕುವದು.

೩) ಶಿಕ್ಷಣದಿಂದ ಮತ್ತು ಶಿಕ್ಷೆಯಿಂದ ಮನುಷ್ಯಕೃತ ಅಪರಾಧಗಳನ್ನು ನಿಲ್ಲಿಸುವದು.

೪) ಅರಣ್ಯ ಸಿಬ್ಬಂದಿಯವರ ನಿರಂತರ ಜಾಗರೂಕತೆ.

ಕ್ರಿಮಿಕೀಟಕಗಳೂ ಅರಣ್ಯಗಳನ್ನು ಅಳಿಯಲು ಸಹಕಾರಿ. ಮಿಡತೆಗಳಂತೂ ಗೊಂಡಾರಣ್ಯಗಳನ್ನೇ ನಾಶವು ಮಾಡಿರುವ ನಿದರ್ಶನವುಂಟು. ಮಿಡತೆಗಳು, ಸೂಕ್ಷ್ಮಾಣುಗಳು, ಶಿಲೀಂಧ್ರಗಳು, ವನ್ಯಮೃಗಗಳು— ಇವುಗಳಲ್ಲಿ ಪ್ರತಿಯೊಂದರಿಂದ ಆಗುವ ಹಾನಿಯನ್ನು ಪ್ರತ್ಯೇಕವಾಗಿ ಶಾಸ್ತ್ರೀಯವಾಗಿ ಅಭ್ಯಸಿಸಿ ಅದಕ್ಕೆ ಪರಿಹಾರ ಕಂಡುಹಿಡಿಯುವದು ಅರಣ್ಯ ಸಂಶೋಧನಾಗಾರದಲ್ಲಿ ನಿರಂತರವಾಗಿ ನಡೆಯುವ ಕೆಲಸ. ಕೀಟ ನಿಯಂತ್ರಣಕ್ಕೆ ಹಲವಾರು ಭಿನ್ನ ವಿಧಾನಗಳಿದ್ದರೂ ಯಾವ ಒಂದು ಬಗೆಯೂ ಸಂಪೂರ್ಣವಾಗಿ ಕೀಟಗಳನ್ನು ನಾಶಪಡಿಸಲಾರದು. ಕೀಟಗಳನ್ನು ಯಶಸ್ವಿಯಾಗಿ ನಿಯಂತ್ರಿಸುವಲ್ಲಿ ಕೀಟಗಳ ಪ್ರಕೃತಿ, ಸ್ವಭಾವ, ಅವುಗಳಿಗಿರುವ ಮೂಲನೆಲೆ, ಅವಕ್ಕೂ ಪರಿಸರಕ್ಕೂ ಇರುವ ಸಂಬಂಧ, ಕೀಟಕಗಳ ಸ್ವಾಭಾವಿಕ ಶತ್ರುಗಳು ಮೊದಲಾದವುಗಳ ಜ್ಞಾನ ಅಗತ್ಯ. ಅಲ್ಲದೆ ಕೀಟನಾಶಗಳಿಂದಾಗುವ ಇತರ ಪರಿಣಾಮಗಳ ಕಡೆಗೂ ಗಮನವೀಯುವದು ಅಗತ್ಯ. ಕೀಟನಾಶಕಗಳ ಬಳಕೆಗೆ ಬೇಕಾಗುವ ಹಣದ ವೆಚ್ಚ ನಾಶವಾಗಬಹುದಾದ ಬೆಳೆಯ ಮೌಲ್ಯಕ್ಕಿಂತ ಹೆಚ್ಚಾಗಬಾರದು. ಶಿಲೀಂಧ್ರಗಳು ಪರೋಪಜೀವನ ನಡೆಸಿ ಆಶ್ರಯ ಜೀವಿ ಕ್ಷೀಣಿಸುವಂತೆ ಮಾಡುತ್ತವೆ. ಸಸ್ಯಗಳಿಗೆ ರೋಗಗಳನ್ನು

ತಾಪಿರುತ್ತವ ಸುಮಾರು ೫೦ ಬಗೆಯ ಶಿಲೀಂಧ್ರಗಳಿವೆ. ಶಿಲೀಂಧ್ರಗಳಲ್ಲಿ ಹೆಚ್ಚಿನವು ನಿರುಪದ್ರವಕಾರಿ. ಬೇರೆ ಸಸ್ಯಗಳಿಗೆ ಯಾವ ತೊಂದರೆಯನ್ನೂ ಮಾಡದ ಕೆಲವೇ ಶಿಲೀಂಧ್ರಗಳಿವೆ. ಸಿರಿಯಾ, ಈಜಿಪ್ತ ಪ್ರದೇಶಗಳ ಸಿಕಮೋರ್ ಜಾತಿಯ ಗಿಡಗಳಿಗೆ ಒಂದು ಬಗೆಯ ಶಿಲೀಂಧ್ರ ತಗಲಿದಾಗ ಎಲೆಗಳ ಮೇಲೆ ಕಪ್ಪು ಪಟ್ಟಿಗಳಾಗುತ್ತವೆ. ಆದರೆ ಇದರಿಂದ ಗಿಡಕ್ಕಾಗಲೀ ಫಲಕ್ಕಾಗಲೀ ಬಾಧಕವಿಲ್ಲ.

ಮಳೆ, ಗಾಳಿ, ಪ್ರವಾಹ, ನೆಲದ ಕುಸಿತ ಮೊದಲಾದ ಕಾರಣಗಳಿಂದಲೂ ಅರಣ್ಯ ಹಾಳಾಗುವದಿದೆ. ಇವೆಲ್ಲ ನೈಸರ್ಗಿಕ ಉಪದ್ರವಗಳು. ನೈಸರ್ಗಿಕ ಉಪದ್ರವಗಳನ್ನು ಉಪಶಮನಗೊಳಿಸಲು ಅರಣ್ಯ ಖಾತೆಯಲ್ಲಿ ಜಾರಿಯಲ್ಲಿರುವ ಹತೋಟಿ ಕ್ರಮಗಳು ಕೆಳಗಿನಂತಿವೆ.

೧) ಪ್ರವಾಹಗಳನ್ನೂ ಮತ್ತು ಹೊಳೆಗಳನ್ನೂ ಸರಿಯಾದ ಕಡೆ ಹರಿಯುವಂತೆ ಮಾಡುವದು.

೨) ತಡೆಗಟ್ಟುಗಳನ್ನು ಹಾಕುವದು.

೩) ಎಲ್ಲೆಕಟ್ಟನ್ನು ಹಾಕುವದು.

೪) ಎಲ್ಲೆಯ ಸುತ್ತ ಅಗಳನ್ನು ತೋಡುವದು.

೫) ಕೊರಕಲನ್ನು ಮುಚ್ಚುವದು ಇತ್ಯಾದಿ.

ಜೀವಂತ ಕಾಡಿನ ವಿಶ್ವದಲ್ಲಿ ಎರಡು ವಿಧದ ಶಕ್ತಿಗಳು ಸರ್ವದಾ ಕೆಲಸ ಮಾಡುತ್ತಿರುತ್ತವೆ. ಇವು ವೃದ್ಧಿ ಮತ್ತು

ಷ್ಟಯು. ಕ್ರಿಮಿ-ಕೀಟಗಳು, ಬೆಳೆಯ ರೋಗಗಳು ಮತ್ತು ಆಗಾಗ್ಗೆ ಸಂಭವಿಸುವ ಬಿರುಗಾಳಿ ಇವುಗಳಿಂದಾಗುವ ನಾಶವನ್ನು ಹೊಸಮರಗಳ ಬೆಳವಣಿಗೆಯು ಸಮತೂಕ ಮಾಡುತ್ತದೆ. ಆದರೆ ಮನುಷ್ಯನ ನಿರ್ಲಕ್ಷ್ಯದ ಮರಗಳ ಕಡಿಯುವಿಕೆ ಸಂಭವಿಸುವ ಸಮತೂಕವನ್ನು ಕೆಡಿಸುತ್ತದೆ. ಅರಣ್ಯಗಳ ಆಕ್ರಮಣ, ಬಲಿಯದ ಮರಗಳ ಕೆಡಹುವಿಕೆ, ಕಳ್ಳಸಾಗಣಿಕೆ, ದನ-ಕರುಗಳನ್ನು ಮೇವಿಗಾಗಿ ಕಾಡಿಗೆ ಅಟ್ಟುವದು ಮತ್ತು ಇನ್ನಿತರ ಮಾನವ ಕೃತ ವನ್ಯಾಪರಾಧಗಳಿಂದ ಅರಣ್ಯಕ್ಕಾಗುವ ಅನ್ಯಾಯವನ್ನು ದೂರ ಮಾಡಲು ಅರಣ್ಯಶಾಸನವನ್ನು ಇನ್ನೂ ಹೆಚ್ಚು ಬಿಗಿಪಡಿಸಿ ತಪ್ಪಿತಸ್ಥರನ್ನು ಉಗ್ರವಾಗಿ ಶಿಕ್ಷಿಸುವದೇ ಏಕಮೇವ ದಾರಿ. ಈ ದಿಶೆಯಲ್ಲಿ ಅರಣ್ಯಾಧಿಕಾರಿಗಳ ಹಾಗೂ ಅವರ ಸಿಬ್ಬಂದಿಗಳ ನಿಷ್ಠಾವಂತ ಕಾರ್ಯತತ್ಪರತೆ ಅವಶ್ಯ.

ನಮ್ಮ ದೇಶದ ಹಲವು ಅರಣ್ಯ ಕ್ಷೇತ್ರಗಳಲ್ಲಿ ಹಿಂದುಳಿದ ಜಂಗಡಗಳು ಇವೆ. ಅವರು ಅಲ್ಲಿ ತಮ್ಮ ಉಪಜೀವನಕ್ಕಾಗಿ ಒಕ್ಕಲುತನ ಮಾಡಿಕೊಳ್ಳುವರು. ಸಂಚಾರಿ ಜೀವನ ಪ್ರವೃತ್ತಿಯುಳ್ಳ ಅವರು ಶೇತಕಿ ಕ್ಷೇತ್ರವನ್ನು ಕಾಲಕಾಲಕ್ಕೆ ಬದಲಿಸುವರು. ಅಷ್ಟು ಮಟ್ಟಿಗೆ ಅರಣ್ಯವು ಹಾಳು ಮಾಡಲ್ಪಡುವದು. ಅವರಿಗೆ ಸರಕಾರ ಕೆಲ ಬೀಳು ಭೂಮಿಯನ್ನು ಬಿಡುಗಡೆ ಮಾಡಿ ಅವರು ಒಂದೆಡೆ ನೆಲೆಸುವಂತೆ ಮಾಡಿದರೆ ಹಿಂದುಳಿದ ವರ್ಗದ ಉದ್ಧಾರವೂ ಆಗುವದು, ಅರಣ್ಯ ಸಂರಕ್ಷಣೆಯೂ ಆಗುವದು.

ದ್ದಾರೆ. ೧೫೫೦ರಲ್ಲಿ ಭಾರತಕ್ಕೆ ಆಗಮಿಸಿದ ಮಾರ್ಕೊ
ಪೋಲೋ, ೧೪೪೪ರಲ್ಲಿ ವಿಜಯನಗರವನ್ನು ಸಂದರ್ಶಿಸಿ
ಅಬ್ದುರ್ ರಜಾಕ್ (Abd-er-Razzak) ತಮ್ಮ ಪ್ರವಾ
ಕಥನಗಳಲ್ಲಿ ಕರ್ನಾಟಕದ ಅರಣ್ಯ ಸಂಪತ್ತು ಮತ್ತು
ಅದರ ಆರ್ಥಿಕ ಪ್ರಾಮುಖ್ಯತೆಗಳನ್ನು ಪ್ರಸ್ತಾಪಿಸಿದ್ದಾ
ವಿಜಯನಗರದ ರಾಜ-ಮಹಾರಾಜರುಗಳ ಕಾಲದಲ್ಲಿ ಕರ್ನಾ
ಟಕದ ಅರಣ್ಯಾಡಳಿತವನ್ನು ದಕ್ಷರೀತಿಯಿಂದ ನಿರ್ವಹಿಸಲಾಗ
ತ್ತಿತ್ತು ಹಾಗೂ ವನಶ್ರೀವರ್ಧನೆಗೆ ವಿಶೇಷ ಗಮನ ಕೊ
ಲಾಗಿತ್ತು. ೧೫೬೫ರಲ್ಲಿ ಷಾಹಿ ಸಂಸ್ಥಾನಗಳೆಲ್ಲ ಒಟ್ಟು ಸೇ
ವಿಜಯನಗರ ಸಾಮ್ರಾಜ್ಯವನ್ನು ಇತಿಶ್ರೀಗೊಳಿಸಿದರ
ಅರಾಜಕತೆ, ಆಡಳಿತ ಶೈಥಿಲ್ಯ ಹಾಗೂ ದಬ್ಬಾಳಿಕೆ ತುಂ
ತುಳುಕುತ್ತಿದ್ದ ಆ ಕಾಲದಲ್ಲಿ ವಿಪಿನೋದ್ಧಾರ ಅಧೋಮು
ವಾಯಿತು. ಅರಣ್ಯಲೂಟಿಗಳಿಗೆ ನೆಲೆಯಿಲ್ಲದಂತಾಯಿತ
ಅನೇಕರು ಬೆಲೆ ಬಾಳುವ ಶ್ರೀಗಂಧ, ತೇಗು, ಕರಿಮರ, ಭ
ಇತ್ಯಾದಿ ಮರಗಳನ್ನು ಮನಬಂದಂತೆ ಕಡಿದು ನ್ಯಾಯಬಾ
ವಾಗಿ ಮಾರುತ್ತಿದ್ದರು. ಜಮೀನಿಲ್ಲದವರೆಲ್ಲ ವನ್ಯರಾಶಿಯನ
ಕೇತಕಿಭೂಮಿಗೆ ಪರಿವರ್ತಿಸಲಾರಂಭಿಸಿದರು. ಮೈಸೂ
ನಾಡಳಿತ ೧೭೯೯ರಲ್ಲಿ ಬ್ರಿಟಿಶರ ಕೈಸೇರಿತು. ಶ್ರೀಗಂ
ತೇಗು, ಆನೆ, ಹುಲಿ, ಮೆಣಸು, ಏಲಕ್ಕಿ ಮುಂತಾದವು
ಕಡೆಗೇ ಇವರುಗಳ ಗಮನವಿದ್ದರೂ ಲಾರ್ಡ ಡಾಲಹ
(೧೮೪೮-೧೮೫೬)ಯ ನಂತರ ಬಂದ ಬ್ರಿಟಿಶ್ ಅಧಿಕಾರಿಗ
ಅರಣ್ಯ ಇಲಾಖೆಯನ್ನು ಆಧುನಿಕ ರೀತಿಯಲ್ಲಿ ವ್ಯವಸ್ಥಿತಗೊ

ಸುವದರ ಬಗ್ಗೆ ಹೆಚ್ಚು ಗಮನ ಕೊಟ್ಟರು. ೧೮೬೫ ಮತ್ತು ೧೮೯೪ನೇ ಸಂವತ್ಸರಗಳಲ್ಲಿ ಜಾರಿಗೆ ಬಂದ ಅರಣ್ಯಶಾಸನಗಳು ದೇಶದ ಅನೇಕ ಭಾಗಗಳಲ್ಲಿಯು ಅರಣ್ಯ ನಾಶಗಳನ್ನು ಸಮರ್ಥವಾಗಿ ತಡೆಗಟ್ಟಲು ನೆರವಾದವು. ಆದರೆ ವನ್ಯೋತ್ಪತ್ತಿಗಳಿಗೆ ಬೇಡಿಕೆ ಹೆಚ್ಚಿದಂತೆಲ್ಲ ಅರಣ್ಯಶಾಸನದ ಬಿಗುವು ಸಡಿಲುಗೊಳ್ಳಲಾರಂಭಿಸಿತು. ತತ್ಪರಿಣಾಮವಾಗಿ ವಿಪಿನ ವಿಸ್ತಾರವೂ ಮೊಟಕಾಗಲಾರಂಭಿಸಿತು. ಅರಣ್ಯೋತ್ಪನ್ನಗಳ ಕ್ಷಯಾಭಿವೃದ್ಧಿಯಲ್ಲಿ ಸಮತೋಲ ಸ್ಥಾಪಿಸಲು ಸ್ವಾತಂತ್ರ್ಯಪ್ರಾಪ್ತಿಯ ನಂತರ ಭಾರತ ಸರಕಾರವು ೧೯೫೨ರಲ್ಲಿ ರಾಷ್ಟ್ರೀಯ ಅರಣ್ಯ ಧೋರಣೆ ಗೊತ್ತುವಳಿಯನ್ನು ಸ್ವೀಕರಿಸಿತು. ಅರಣ್ಯ ಸಂಪತ್ತು ಕ್ಷೀಣವಾಗದಂತೆ ನೋಡಿಕೊಳ್ಳುವ ಪ್ರಯತ್ನಗಳು ನಡೆದವು. ಶಾಸನ ಸಮ್ಮತ ಸ್ಥಿತಿಯ ಪ್ರಕಾರ ಕರ್ನಾಟಕ ರಾಜ್ಯದ ಅರಣ್ಯಗಳ ವರ್ಗೀಕರಣ ಕೆಳಗಿನಂತಿದೆ.

| | |
|---|---|
| ೧) ರಾಜ್ಯದ ಕಾಯ್ದಿರಿಸಿದ ಅರಣ್ಯಗಳು | ೧,೧೦೦೯.೪೪ ಚ. ಮೈಲು |
| ೨) ರಕ್ಷಣೆಗೊಳಪಟ್ಟ ವಿಪಿನ ಪ್ರದೇಶ | ೧೦೦೪.೩೨ ಚ. ಮೈಲು |
| ೩) ಹಳ್ಳಿಯ ಕಾಡುಗಳು | ೫೧.೯೭ ಚ. ಮೈಲು |
| ೪) ಜಿಲ್ಹಾ ಅರಣ್ಯಗಳು | ೧,೧೦೭.೮೧ ಚ. ಮೈಲು |

೫) ಕರ್ನಾಟಕ ಅರಣ್ಯ ನಿಯಮದ
ವಿಧಿ ೩೫ರ ಪ್ರಕಾರ ಕಾಯ್ದಿರಿಸಿದ
ಅರಣ್ಯ ಪ್ರದೇಶ ೬೬.೫೦ ಚ. ಮೈಲು

೬) ವಿಧಿ ೪ರ ಪ್ರಕಾರ
ಕಾಯ್ದಿರಿಸಿದ ಪ್ರದೇಶ ೮೭.೦೮ ಚ. ಮೈಲು

೭) ಅವರ್ಗೀಕೃತ ಅರಣ್ಯಗಳು ೧೭೯.೬೭ ಚ. ಮೈಲು

೮) ಇಲಾಖೆಯ ಮೇಲ್ವಿಚಾರಣೆ
ಯಲ್ಲಿರುವ ಇತರ ಪ್ರದೇಶಗಳು ೬೮.೩೧ ಚ. ಮೈಲು

---

ಒಟ್ಟು ೧೩೫೭೫.೧೦ ಚ. ಮೈಲು

ರಾಜ್ಯದ ಅರಣ್ಯಗಳು ದಕ್ಷಿಣದ ಉಷ್ಣವಲಯಕ್ಕೆ ಸೇರಿದವುಗಳಾಗಿವೆ. ಹವಾಮಾನ, ವಾರ್ಷಿಕ ಮಳೆ, ಭೂಸ್ವರೂಪ, ಆಯಾ ಪ್ರದೇಶಗಳಲ್ಲಿ ಬೆಳೆಯುತ್ತಿರುವ ವೃಕ್ಷರಾಜಿ ಮತ್ತು ಇತರ ವಿಷಯಗಳನ್ನು ಆಧರಿಸಿ ನಮ್ಮ ರಾಜ್ಯದ ಅರಣ್ಯಗಳನ್ನು ಐದು ಮುಖ್ಯ ನಮೂನೆಗಳಲ್ಲಿ ವಿಂಗಡಿಸಲಾಗಿದೆ:

೧) ಉಷ್ಣವಲಯದ ತೇವಪೂರಿತ ನಿತ್ಯ ಹರಿದ್ವರ್ಣ ಅರಣ್ಯಗಳು [ಟ್ರಾಪಿಕಲ್ ಎವರ್‌ಗ್ರೀನ್ ಫಾರೆಸ್ಟ್ಸ್]

೨) ಉಷ್ಣವಲಯದ ಭಾಗಶಃ ನಿತ್ಯ ಹರಿದ್ವರ್ಣ ಅರಣ್ಯಗಳು [ಟ್ರಾಪಿಕಲ್ ಸೆಮಿ ಎವ್ವರಗ್ರೀನ್ ಫಾರೆಸ್ಟ್ಸ್]

೩) ಬೇಸಿಗೆಯಲ್ಲಿ ಎಲೆ ಉದುರುವ ಮಲೆನಾಡಿನ ಅರಣ್ಯಗಳು [ಟ್ರಾಪಿಕಲ್ ಮಾಯಿಸ್ಟ್ ಡೆಸಿಡ್ಯೂಅಸ್ ಫಾರೆಸ್ಟ್ಸ್]

೪) ಬೇಸಿಗೆಯಲ್ಲಿ ಎಲೆ ಉದುರುವ ಮೈದಾನ ಸೀಮೆಯ ಒಣಕಾಡುಗಳು [ಟ್ರಾಪಿಕಲ್ ಡ್ರೈ ಡೆಸಿಡ್ಯೂಅಸ್ ಫಾರೆಸ್ಟ್ಸ್]

೫) ಕಳ್ಳಿ–ಕುರುಚಲು ಗಿಡಗಳಿರುವ ಒಣ ಕಾಡುಗಳು
[ಟ್ರಾಪಿಕಲ್ ಡ್ರೈ ಥಾರ್ನ ಫಾರೆಸ್ಟ್ಸ್]

ಮೊದಲಿನ ಎರಡು ಜಾತಿಯ ಕಾಡುಗಳ ವಿಸ್ತೀರ್ಣ :
೧೨೬೫.೧೦ ಚದರು ಮೈಲುಗಳು.

ಮೂರನೆಯ ಜಾತಿಯ ಕಾಡುಗಳ ವಿಸ್ತೀರ್ಣ :
೮೪೦.೦೦ ಚದರು ಮೈಲುಗಳು.

ನಾಲ್ಕನೆಯ ಜಾತಿಯ ಕಾಡುಗಳ ವಿಸ್ತೀರ್ಣ :
೩೦೬೦.೦೦ ಚದರು ಮೈಲುಗಳು.

ಐದನೆಯ ಜಾತಿಯ ಕಾಡುಗಳ ವಿಸ್ತೀರ್ಣ :
೮೪೨೦.೦೦ ಚದರು ಮೈಲುಗಳು.

ಒಟ್ಟು.... ೧೩೫೮೫.೧೦ ಚದರು ಮೈಲುಗಳು

ನಮ್ಮ ರಾಜ್ಯದಲ್ಲಿ ಬೇಸಿಗೆಯಲ್ಲಿ ಎಲೆ ಉದುರುವ ಮೈದಾನ ಸೀಮೆಯ ಒಣಕಾಡುಗಳು ಹಾಗೂ ಕಳ್ಳಿ–ಕುರು

ಚಲು ಗಿಡಗಳಿರುವ ಒಣಕಾಡುಗಳ ಸಂಖ್ಯೆ ಅಧಿಕ. ವರ್ಷಕ್ಕೆ ೩೦-೪೦ ಅಂಗುಲ ಮಳೆಯಾಗುವ ಕಾಡುಗಳಲ್ಲಿ ೫೦-೬೦ ಅಡಿ ಎತ್ತರ ಬೆಳೆಯುವ ಮರಗಳು ಪ್ರಧಾನ ಸೀಮೆಯ ಕಾಡುಗಳ ಮುಖ್ಯ ಲಕ್ಷಣ. ಮಳೆಯಾಗದ ತಿಂಗಳುಗಳಲ್ಲಿ ಮರಗಳಿಂದ ಎಲೆಯೆಲ್ಲ ಉದುರಿ ಬಿದ್ದಿರುತ್ತವೆ. ಇಂಥ ಕಾಡಿನಲ್ಲಿ ಕಾಡ್ಗಿಚ್ಚು ಹರಡುವದು ಹೆಚ್ಚು. ಇದಕ್ಕೆ ಕಾರ್ಗಾಲ ಕಾಡ್ಗಿಚ್ಚು ಎಂದು ಹೆಸರು. ಈ ಕಾರ್ಗಾಲ ಕಾಡುಗಳ ವಿಸ್ತಾರ ನಮ್ಮ ರಾಜ್ಯದಲ್ಲಿ ೩೦೨೦ ಚದರು ಮೈಲುಗಳಷ್ಟಿದೆ. ವರ್ಷಕ್ಕೆ ೩೦ ಅಂಗುಲಗಳಿಗೂ ಕಡಿಮೆ ಮಳೆಬೀಳುವ ಕಾಡುಗಳಲ್ಲಿ ಬಹಳ ದೊಡ್ಡ ಮರಗಳು ಇರುವದಿಲ್ಲ. ಕುರುಚಲು, ಮುಳ್ಳು ಗಿಡಗಳು ಹಾಗೂ ಪೊದೆಗಳು ಹೆಚ್ಚು. ಮರಗಳಿದ್ದರೂ ಸಣ್ಣವು. ಇಂಥ ಕಾಡಿಗೆ ಒಣ ಕಾಡುಗಳು ಎಂದು ಹೆಸರು. ನಮ್ಮ ರಾಜ್ಯದಲ್ಲಿ ಈ ಕಾಡೇ ತುಂಬ ಹೆಚ್ಚಿನ ಪ್ರಮಾಣದಲ್ಲಿ ಇರುವದು. ಇದರ ವಿಸ್ತಾರ ೮೪೨೦ ಚದರು ಮೈಲುಗಳು.

ನಮ್ಮ ರಾಜ್ಯದ ಜಿಲ್ಲೆಗಳ ಪೈಕಿ ಉತ್ತರ ಕನ್ನಡದಲ್ಲಿ ಅರಣ್ಯ ಪ್ರದೇಶ ಹೆಚ್ಚು. ಉತ್ತರ ಕನ್ನಡ ಜಿಲ್ಲೆ ರಾಜ್ಯದ ವಾಯುವ್ಯ ಭಾಗದಲ್ಲಿರುವ ಜಿಲ್ಲೆ. ಇತ್ತ ಕಾಡು, ಅತ್ತ ಕಡಲು, ಮಲೆನಾಡಿನ ಬೆಡಗು, ಕಾಡು ಕರಾವಳಿಯ ಚೆಲುವು, ನಾಗಮೋಡಿ ಘಟ್ಟದ ಮಾರ್ಗಗಳ ರುದ್ರ ರಮಣೀಯ ಸೌಂದರ್ಯದ ಸಾಕ್ಷಾತ್ಕಾರ, ನದೀಮುಖಗಳ ಸಡಗರ, ಅದ್ಭುತ ರಮ್ಯ ತಪಸಲುಗಳು, ಗಗನವೇ ಚುಂಬಿಸುವ ಉತ್ತುಂಗ ಶಿಖರ,

ಸಾಗರವು ಆಗಸವ ಆಲಿಂಗಿಸುವ ಕ್ಷಿತಿಜ— ಜಿಲ್ಲೆಯ ದಾರಿದ್ರ್ಯ ಮರೆಸುವ ಸೌಂದರ್ಯಗಳು. ಭೌಗೋಲಿಕವಾಗಿ ಈ ಜಿಲ್ಲೆಯನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಕಡಲ ಕರೆಯಿಂದ ೫-೧೦ ಮೈಲು ಅಗಲ ೮೦ ಮೈಲು ಉದ್ದ ಇರುವ ಮೈದಾನ, ಕರಾವಳಿ. ಇದರ ಪೂರ್ವ ಮಗ್ಗಲಿಗೆ ಉದ್ದಕ್ಕೂ ಗೋಡೆಯಂತೆ ದಕ್ಷಿಣೋತ್ತರವಾಗಿ ನೂರು ಮೈಲು ದೂರು ಹಬ್ಬಿನಿಂತಿರುವ ಸಹ್ಯಾದ್ರಿ ಸಾಲು. ಸಮುದ್ರದ ಕಡೆಗೆ ಕಡಿದಾಗಿ ಇಳುಕಲಾಗಿರುವ ಪರ್ವತಶ್ರೇಣಿಯ ಜಾರು ಮೈಮೇಲೆ ಪಶ್ಚಿಮಾಭಿಮುಖವಾಗಿ ಮಹೋಲ್ಲಾಸದಿಂದ ಹರಿಯುವ ನದಿಗಳ ಪೈಕಿ ಕಾಳಿ, ಗಂಗಾವಳಿ, ಅಘನಾಶಿನಿ, ಶರಾವತಿಗಳು ಮುಖ್ಯ. ಜಿಲ್ಲೆಯ ಜನಸಂಖ್ಯೆ ೮೪೯೧೦೫. ಭೂವಿಸ್ತೀರ್ಣ ೩೯೬೪ ಚದರು ಮೈಲುಗಳು. ಇದರಲ್ಲಿ ೩೨೧೭.೮೪ ಚದರು ಮೈಲುಗಳಲ್ಲಿ ಅರಣ್ಯ ಪಸರಿಸಿದೆ. ಅಂದರೆ ಜಿಲ್ಲೆಯ ಭೂವಿಸ್ತೀರ್ಣದ ಶೇಕಡಾ ೮೧.೨ ರಷ್ಟು ವನ್ಯ ಪ್ರದೇಶ. ರಾಜ್ಯದ ಭೂಕ್ಷೇತ್ರದ ಶೇಕಡಾ ಮಟ್ಟದಲ್ಲಿ ಹೇಳುವದಾದರೆ ಇದು ೨೩.೭೦ ರ ಪ್ರಮಾಣ. ಸಾಗವಾನಿ, ಹೊನ್ನೆ, ನಂದಿ, ಮತ್ತಿ ಮುಂತಾದ ನಾಟದ ತುಂಡು ಒದಗಿಸುವ ಮರಗಳು, ಬೆಂಕಿಪೆಟ್ಟಿಗೆ ಕೈಗಾರಿಕೆಗೆ ಬೇಕಾಗುವ ಬೂರಗ, ತೊಪ್ಪೆ, ಚಾಂಗ, ಸಾವರ್ ಮುಂತಾದ ಮಿದು ಮರಗಳು, ಕಾಗದದ ತಯಾರಿಕೆಗೆ ಒದಗಿ ಬರುವ ಬಿದಿರು ಉತ್ತರಕನ್ನಡ ಜಿಲ್ಲೆಯ ಅರಣ್ಯಗಳಲ್ಲಿ ವಿಪುಲವಾಗಿವೆ. ತಾಳೆ ಬೆಳೆಯುವ ಪ್ರದೇಶದ ವಿಸ್ತೀರ್ಣ ೨೫,೫೦೦ ಎಕರೆಗಳು. ಎಣ್ಣೆಗೆ ಆಕರ

ವಾದ ಮರಗಳಲ್ಲಿ ಗಂಧದ ಮರಗಳ ಅಗ್ರಗಣ್ಯ. ಅಳಲೆ, ಸೀಗೆ, ಜೇನುತುಪ್ಪ, ಅರಗು, ಗೋಂದು ಇವು ಇನ್ನೂ ಕೆಲವು ಮುಖ್ಯ ವನ್ಯೋತ್ಪತ್ತಿಗಳು. ಇಡೀ ರಾಜ್ಯದ ಅರಣ್ಯ ಕಾಣಿಕೆಯ ಒಟ್ಟು ಉತ್ಪನ್ನದಲ್ಲಿ ೫೫% ರಷ್ಟು (ಸುಮಾರು ರೂ. ೫ ಕೋಟಿ) ಈ ಜಿಲ್ಲೆಯ ಕೊಡುಗೆ.

ನಮ್ಮ ರಾಜ್ಯದ ವಾರ್ಷಿಕ ವನ್ಯೋತ್ಪತ್ತಿ ಮೌಲ್ಯ ಸುಮಾರು ೧೨ ಕೋಟಿ ರೂಪಾಯಿಗಳು. ಅಂದರೆ ರಾಜ್ಯ ಸರಕಾರದ ಉತ್ಪನ್ನದಲ್ಲಿ ಶೇಕಡಾ ೧೫ರಷ್ಟು ಅರಣ್ಯಗಳಿಂದ ಬರುವದು. ರಾಜ್ಯ ಸರಕಾರಕ್ಕೆ ಅರಣ್ಯದಿಂದ ಪ್ರತಿ ಚದರು ಮೈಲಿಗೆ ರೂ. ೮೬೪೦ ವರಮಾನವಿದೆ. ರಾಜ್ಯದ ಅರಣ್ಯೋತ್ಪಾದನೆ ಇತರ ರಾಜ್ಯಗಳಲ್ಲಿರುವದಕ್ಕಿಂತ ಅಧಿಕವೆಂದೇ ಹೇಳಲಾಗಿದೆ. ಗಂಧದ ಮರ, ಸಾಗವಾನಿ, ಕರಿಮರಗಳು, ಸಾದೆ, ಇದ್ದಿಲು, ಬಿದಿರು, ಹುಲ್ಲು ಇವು ನಮ್ಮ ರಾಜ್ಯದ ಮುಖ್ಯ ಅರಣ್ಯೋತ್ಪತ್ತಿಗಳು. ರಾಜ್ಯದಲ್ಲಿರುವ ಕಾಗದದ ಕಾರ್ಖಾನೆಗಳು, ಗಂಧದ ಎಣ್ಣೆ ಮತ್ತು ಸೋಪಿನ ಕಾರ್ಖಾನೆಗಳು ಹಾಗೂ ಮರ ಕೊಯ್ಯುವ ಕಾರ್ಖಾನೆಗಳು ನೇರವಾಗಿ ರಾಜ್ಯದಲ್ಲಿಯ ಅರಣ್ಯೋತ್ಪನ್ನಗಳನ್ನೇ ಅವಲಂಬಿಸಿವೆ. ರಾಜ್ಯದ ಗಂಧದ ಮರ ಶ್ರೇಷ್ಠವಾದುದು. ಶ್ರೀಗಂಧದ ಮರ ಮತ್ತು ಚಂದನದ ಮರ ಇದರ ಪರ್ಯಾಯ ನಾಮಗಳು. ಗಂಧದ ಮರದಿಂದ ಭಟ್ಟಿ ಇಳಿಸಿ ಲೋಕ ಪ್ರಸಿದ್ಧವಾದ ಗಂಧದ ಎಣ್ಣೆಯನ್ನು ತಯಾರಿಸಲಾಗುತ್ತಿದೆ. ಮೈಸೂರಿನಲ್ಲೂ, ಶಿವಮೊಗ್ಗ

ದಲ್ಲೂ ಗಂಧದ ಎಣ್ಣೆ ತಯಾರಿಸುವ ಕಾರ್ಖಾನೆಗಳಿವೆ. ಈ ಗಂಧದ ಎಣ್ಣೆ ಬಹಳ ಸುವಾಸನೀಯವಾದುದು. ಪಾಶ್ಚಾತ್ಯ ದೇಶಗಳಿಗೆ ವಿಶೇಷವಾಗಿ ರಫ್ತಾಗುತ್ತದೆ. ಕರ–ಕುಶಲ ಕೈಗಾರಿಕಾ ವಸ್ತುಗಳ ತಯಾರಿಕೆಯಲ್ಲಿ ಗಂಧದ ತುಂಡುಗಳನ್ನು ವಿಸ್ತೃತವಾಗಿ ಉಪಯೋಗಿಸಲಾಗುತ್ತಿದೆ. ಉತ್ತರಕನ್ನಡ ಮತ್ತು ಶಿವಮೊಗ್ಗಾ ಜಿಲ್ಲೆಗಳಲ್ಲಿ ಗಂಧದ ಕೆತ್ತನೆಯ ಕೆಲಸಗಳಿಗೆ ಪ್ರಸಿದ್ಧರಾದ ಗುಡಿಗಾರರು ಇಂದಿಗೂ ಈ ಕಲೆಯನ್ನು ಒಂದು ಕಸಬಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಗಂಧದ ಕಲಾಕೃತಿಗಳು ಸ್ವದೇಶದಲ್ಲಿ ಮಾತ್ರವಲ್ಲದೆ ಪರದೇಶಗಳಲ್ಲೂ ಒಳ್ಳೆಯ ಮಾರುಕಟ್ಟೆ ಪಡೆದಿವೆ. ದೇವರ ಪೂಜೆಗೂ ಶ್ರೀಗಂಧ ಅವಶ್ಯ. ದೇವಾರ್ಪಿತವಾದ ಗಂಧವನ್ನು ಭಕ್ತಾದಿಗಳು ಮೈಗೆ ಲೇಪನ ಮಾಡಿಕೊಳ್ಳುತ್ತಾರೆ. ಗಂಧ ಲೇಪನ ದೇಹಕ್ಕೆ ಸುವಾಸನೆಯನ್ನು ಕೊಡುತ್ತದೆ. ಅಂಗಕಾಂತಿ ಹೆಚ್ಚಿಸುತ್ತದೆ. ಉಷ್ಣಮೂಲವಾದ ರೋಗಗಳನ್ನು ಶಮನ ಮಾಡುವ ಶಕ್ತಿ ಶ್ರೀಗಂಧಕ್ಕಿದೆ. ಇತ್ತೀಚೆಗೆ ಅನೇಕ ಚರ್ಮರೋಗ ನಿವಾರಕ ಔಷಧಗಳಿಗೆ ಶ್ರೀಗಂಧದ ವಾಸನೆ ಕಟ್ಟುತ್ತಿದ್ದಾರೆ. ಜಗತ್ಪ್ರಸಿದ್ಧವಾದ ಮೈಸೂರು ಗಂಧದ ಸಾಬೂನಿಗೆ ಶ್ರೀಗಂಧದ ತೈಲವನ್ನೂ ಗುಲಾಬಿಯ ಸಾರವನ್ನೂ ಸೇರಿಸುತ್ತಾರೆ. ಹಿಂದೆ ಸ್ತ್ರೀಯರು ಅಲಂಕರಣದ ಒಂದು ಸಾಧನವಾಗಿ ಗಂಧವನ್ನು ಬಳಸುತ್ತಿದ್ದುದರ ಉಲ್ಲೇಖ ಕಾವ್ಯಗಳಲ್ಲಿ ಬರುತ್ತದೆ. ತೇದ ನುಣುಪಾದ ಗಂಧದಿಂದ ಹೆಣ್ಣು ಮಕ್ಕಳು ತಮ್ಮ ಗಲ್ಲ ಹಾಗೂ ಹೊಳೆಗಳ ಮೇಲೆ ಚಿತ್ರಗಳನ್ನು ಬರೆದುಕೊಳ್ಳುತ್ತಿದ್ದರಂತೆ.

ಭಾರತದಲ್ಲಿ ೧೫೫೦೦೦ ಚದರು ಕಿಲೋ ಮೀಟರ ಪ್ರದೇಶದಲ್ಲಿ ಗಂಧದ ಮರ ಬೆಳೆಯುತ್ತದೆ. ಇವರಲ್ಲಿ ಬಹು ಪಾಲು ಬೆಳೆಯುವದು ಕರ್ನಾಟಕ ರಾಜ್ಯದಲ್ಲಿ. ಸಮುದ್ರ ಮಟ್ಟದಿಂದ ಹಿಡಿದು ಸುಮಾರು ೧೨೦೦ ಮೀಟರ ಎತ್ತರದ ವರೆಗಿನ ಬೆಟ್ಟ ಪ್ರದೇಶಗಳಲ್ಲಿ ಸೊಗಸಾಗಿ ಬೆಳೆಯುವ ಗಂಧದ ಮರ ಕರ್ನಾಟಕ ರಾಜ್ಯದ ಕೊಡಗು, ಮೈಸೂರು, ಹಾಸನ, ಚಿಕ್ಕಮಗಳೂರು, ಶಿವಮೊಗ್ಗಾ, ಧಾರವಾಡ ಮತ್ತು ಬೆಳಗಾವಿ ಜಿಲ್ಹೆಗಳಲ್ಲಿ ಹೇರಳವಾಗಿ ಬೆಳೆಯುತ್ತದೆ. ಮೈಸೂರು ರಾಜ್ಯ ದಲ್ಲಿ ಗಂಧದ ಮರ ಎಲ್ಲಿ ಬೆಳೆದರೂ ಇದು ಸರಕಾರದ ಸ್ವತ್ತೇ ಆಗಿದೆ. ಮತ್ತು ಸರಕಾರದ ಅನುಮತಿಯಿಲ್ಲದೆ ಇದನ್ನು ಕತ್ತರಿಸುವದನ್ನೂ, ಕೆತ್ತನೆ ಕೆಲಸಗಳಿಗೆ ಉಪಯೋಗಿಸುವದನ್ನೂ ಹಾಗೂ ಇದರಿಂದ ಎಣ್ಣೆ ದೊರತೆಗೆಯುವದನ್ನೂ ನಿಷೇಧಿಸಲಾಗಿದೆ. ವರ್ಷಂಪ್ರತಿ ನಮ್ಮ ರಾಜ್ಯದ ಅರಣ್ಯಗಳಲ್ಲಿಯ ೨೫೦೦ ಟನ್ ಗಂಧದ ಮರವನ್ನು ಔದ್ಯಮಿಕ ಉಪಯೋಗಕ್ಕಾಗಿ ಬಿಡುಗಡೆ ಮಾಡಲಾಗುತ್ತಿದೆ. ಸಾಗವಾನಿ ಮತ್ತು ಕರಿಮರಗಳೂ ಬೆಳೆಯುಳ್ಳವು. ರಾಜ್ಯದಲ್ಲಿ ಸುಮಾರು ೨೦ ಸಾವಿರ ಎಕರೆ ಪ್ರದೇಶದಲ್ಲಿ ಸಾಗವಾನಿ ಬೆಳೆಯುತ್ತದೆ. ಸಾಗವಾನಿಯೂ ಒಂದು ಶ್ರೇಷ್ಠವಾದ ಮರ. ಹಸಮಾಡಿದ ಮೇಲೆ ಸಾಮಾನ್ಯವಾಗಿ ಅದು ಬಿಗಿ ಹಿಡಿಯುವದಿಲ್ಲ; ಮತ್ತು ಈ ಮರದಿಂದ ಕೆಲಸ ಮಾಡುವದು ಸುಲಭ. ಮನೆಗೆ ಬೇಕಾದ ಮರಮುಟ್ಟುಗಳನ್ನೂ, ಕಂಬಗಳನ್ನೂ, ಕುರ್ಚಿ, ಮೇಜು, ಮಂಚ ಮುಂತಾದ ಎಲ್ಲ ಬಗೆಯ ಉಪಯೋಗದ ಸಾಮಾನು

ಗಳನ್ನೂ ಇದರಿಂದ ಮಾಡುತ್ತಾರೆ. ನಮ್ಮ ರಾಜ್ಯದ ಕಾಡು ಗಳಲ್ಲಿ ಕಿರುಬಿದಿರು ಸಾಮಾನ್ಯವಾಗಿ ಎಲ್ಲೆಲ್ಲಿಯೂ ಬೆಳೆಯು ತ್ತದೆ. ಕಾಗದ ಮತ್ತು ಪಲ್ಪ್ ಅಥವಾ ತಿರುಳಿನ ಕೈಗಾರಿಕೆಗೆ ಮುಖ್ಯವಾಗಿ ಬೇಕಾದುದು ಬಿದಿರು. ಭದ್ರಾವತಿಯಲ್ಲಿ ಸುತ್ತ ಮುತ್ತಲೂ ಇರುವ ಸಾವಿರಾರು ಚದರು ಮೈಲು ವಿಸ್ತಾರದ ಕಾಡುಗಳಲ್ಲಿ ಬೆಳೆಯುವ ಕಿರುಬಿದಿರು ಭದ್ರಾವತಿಯ ಕಾಗದ ಕಾರ್ಖಾನೆಗೆ ಆಧಾರ. ದಾಂಡೇಲಿಯಲ್ಲಿರುವ ಕಾಗದದ ಕಾರ್ಖಾನೆಗೆ ಬಿದಿರಿನ ವಿಶೇಷ ಪೂರೈಕೆ ಉತ್ತರ ಕನ್ನಡ ಜಿಲ್ಲೆಯ ಅರಣ್ಯಗಳಿಂದ ಆಗುವದು. ಕೊಡಗು, ಮೈಸೂರು ಕಾಡುಗಳಲ್ಲಿ ಬಿದಿರಿಗೆ ಕೊರತೆಯಿಲ್ಲ. ಇಷ್ಟೆಲ್ಲ ಬಿದಿರು ದೊರ ಕಿದರೂ ನಮ್ಮ ನಾಡಿನಲ್ಲಿ ಕಾಗದ ಮತ್ತು ಪತ್ರಿಕಾ ಕಾಗದಕ್ಕೆ ನಾವು ಪರರನ್ನಾಶ್ರಯಿಸಿದ್ದೇವೆ. ಬಿದಿರು ಹೆಚ್ಚಾಗಿರುವ ಕೆನಡಾ ದೇಶ ಈಗ ಪ್ರಪಂಚದ ಅವಶ್ಯಕತೆಯ ಅರ್ಧಭಾಗ ಮುದ್ರಣ ಕಾಗದವನ್ನು (ಪತ್ರಿಕಾ ಕಾಗದವನ್ನು) ಸರಬರಾಜು ಮಾಡು ತ್ತಿದೆ. ನಮ್ಮ ನಾಡಿನಲ್ಲೂ ಅಲ್ಲಿನಂತೆ ಕಚ್ಚಾ ಪದಾರ್ಥ ಹಾಗೂ ವಿದ್ಯುಚ್ಛಕ್ತಿಗೆ ಬೇಕಾದಷ್ಟು ಸೌಕರ್ಯಗಳಿವೆ. ಪತ್ರಿಕಾ ಕಾಗದದ ತಯಾರಿಕೆಗೆ ನಾವು ವಿಶೇಷ ಗಮನ ಕೊಟ್ಟಿಲ್ಲ. ಪ್ರಯತ್ನಿಸಿದರೆ ಕನ್ನಡ ನಾಡು ಭಾರತಕ್ಕೆಲ್ಲ ಪತ್ರಿಕಾ ಕಾಗದ ಮತ್ತು ಇತರ ಕಾಗದಗಳನ್ನು, ರಟ್ಟುಗಳನ್ನು ತಯಾರಿಸಿ ಒದಗಿಸಬಹುದು. ದಿ ಮೈಸೂರು ಪೇಪರ ಮಿಲ್ಸ ಲಿಮಿಟೆಡ್, ಭದ್ರಾವತಿ; ದಿ ವೆಸ್ಟ ಕೋಸ್ಟ ಪೇಪರ ಮಿಲ್ಸ ಲಿಮಿಟೆಡ್, ದಾಂಡೇಲಿ; ಮಂಡ್ಯ ನ್ಯಾಷನಲ್ ಪೇಪರ ಮಿಲ್ಸ

ಲಿಮಿಟೆಡ್, ಬೆಳಗೊಳ; ದಿ ಸೌಥ್ ಇಂಡಿಯಾ ಪೇಪರ ಮಿಲ್ಸ
ಲಿಮಿಟೆಡ್, ನಂಜನಗೂಡು— ಇವು ಕರ್ನಾಟಕದ ಕಾಗದದ ಕಾರ್ಖಾನೆಗಳು. ಇವುಗಳಲ್ಲಿ ಅತ್ಯಂತ ಹಳೆಯದು ಭದ್ರಾವತಿಯ ಕಾರ್ಖಾನೆ. ದಾಂಡೇಲಿಯದು ಅತ್ಯಂತ ದೊಡ್ಡದು.

ಕಾಡುಗಳಲ್ಲಿ ಬೆಳೆಯುವ ಕೆಲವು ಮರಗಳಿಂದ ಕೃತಕ ರೇಷ್ಮೆಯನ್ನು ತಯಾರಿಸಬಹುದು. ಮೈಸೂರಿನಲ್ಲಿ ಇದಕ್ಕೆ ಸಾಕಷ್ಟು ಅವಕಾಶವಿದೆ.

ಜೇನುತುಪ್ಪ, ಗೋಡಂಬಿ, ಅಂಟು, ರಾಳ ಹಾಗೂ ಇತರ ವಸ್ತುಗಳನ್ನು ಸಂಗ್ರಹಿಸುವದರಿಂದ ರಾಜ್ಯ ಸರಕಾರಕ್ಕೆ ರೂ. ೧೬ ಲಕ್ಷ ವಾರ್ಷಿಕ ವರಮಾನವಿರುವದು. ಪ್ಲೈವುಡ್, ಕರಿಮರ, ಮರದ ಕಂಬಗಳು, ಸುಗಂಧಯುಕ್ತ ಪುಷ್ಪಗಳು, ಗಂಧದ ಎಣ್ಣೆ ಹಾಗೂ ಗಿಡಮೂಲಿಕೆಗಳು ನಿರ್ಯಾತವಾಗುವ ನಮ್ಮ ರಾಜ್ಯದ ಮುಖ್ಯ ಅರಣ್ಯೋತ್ಪಾದಿತ ಸರಕುಗಳು. ಇತ್ತೀಚಿನ ದಿನಗಳಲ್ಲಿ ಪ್ಲೈವುಡ್ ಉತ್ಪಾದನಾ ಸಾಮರ್ಥ್ಯ ಹಾಗೂ ನಿರ್ಯಾತ ಹೆಚ್ಚುತ್ತಲಿರುವದು ತುಂಬ ಪ್ರೋತ್ಸಾಹಕಾರಕ ಸಂಗತಿ. ಯುರೋಪದ ಮಾರುಕಟ್ಟೆಗಳಲ್ಲಿ ಪ್ಲೈವುಡ್ ಕಟ್ಟಿಗೆಗೆ ಸೊಗಸಾದ ಬೇಡಿಕೆ ಇದೆ. ಗಂಧದ ಕಟ್ಟಿಗೆಗಳಂತೆ ಕರಿಮರ ಕಟ್ಟಿಗೆ ತುಂಡುಗಳನ್ನೂ ಕರ–ಕುಶಲ ಕೈಗಾರಿಕೆಗಳಲ್ಲಿ ಬಳಸಿಕೊಳ್ಳಲಾಗುತ್ತಿದೆ. ಕರಿಮರವನ್ನು ಸಂಸ್ಕರಣಗೊಳಿಸಿ ನಿರ್ಯಾತ ಮಾಡಲಾಗುತ್ತಿದೆ. ಜಪಾನ ದೇಶವು ಇತ್ತೀಚೆಗೆ

ಅಧಿಕ ಪ್ರಮಾಣದಲ್ಲಿ ಈ ಮರಗಳನ್ನು ಆಯಾತ ಮಾಡಿ ಕೊಳ್ಳುತ್ತಲಿವೆ. ಪ್ರತಿ ವರುಷ ಸುಮಾರು ೩೫ಲಕ್ಷ ರೂಪಾಯಿ ಮೌಲ್ಯದ ಕರ್ನಾಟಕ ರಾಜ್ಯದ ಅರಣ್ಯೋತ್ಪತ್ತಿ ಸರಕುಗಳು ವಿದೇಶಗಳಿಗೆ ನಿರ್ಯಾತವಾಗುತ್ತವೆ.

## ರಾಜ್ಯದ ಅರಣ್ಯ ವಿಸ್ತಾರ

ರಾಜ್ಯದ ಕೆಲವು ಪ್ರದೇಶಗಳ ಹವಾಮಾನ ಅರಣ್ಯಗಳ ಸರ್ವತೋಮುಖ ಬೆಳವಣಿಗೆಗೆ, ಅಭಿವೃದ್ಧಿಗೆ ಪ್ರಶಸ್ತವಾಗಿದೆ. ಉತ್ತರದ ಕೆಲವೆಡೆಗಳಲ್ಲಿ ವಾರ್ಷಿಕ ಮಳೆ ೧೫ ಅಂಗುಲದಷ್ಟು ಬಿದ್ದರೂ ಪಶ್ಚಿಮ ಘಟ್ಟಗಳ ಕೆಲವೆಡೆಗಳಲ್ಲಿ ೩೦೦ ಅಂಗುಲ ಮಳೆ ಬಿದ್ದುದಕ್ಕೂ ಆಧಾರಗಳಿವೆ. ರಾಜ್ಯದ ಬಹು ಭಾಗ ದಲ್ಲಿ ಅತ್ಯಲ್ಪ ಸಂಖ್ಯೆಯ ವಿರಳ ಹಾಗೂ ಕೆಳದರ್ಜೆಯ ಅರಣ್ಯ ಗಳಿವೆ. ಬೀದರ, ವಿಜಾಪುರ, ರಾಯಚೂರು. ಗುಲ್ಬರ್ಗಾ, ಬಳ್ಳಾರಿ, ಜಿಲ್ಲೆಗಳಲ್ಲಿ ಇರುವ ಅರಣ್ಯಗಳು ಅತ್ಯಲ್ಪ. ಇದರಿಂದ ಆ ಭಾಗಗಳ ಕೃಷಿ ಹಾಗೂ ಹವಾಮಾನದ ಮೇಲೆ ಮೇಲಿಂದ ಮೇಲೆ ಉಂಟಾಗುವ ವೈಪರೀತ್ಯ ಮನೋವೇದಕ. ರಾಜ್ಯದ ಕೆಲವೇ ಭಾಗಗಳಲ್ಲಿ ಬಹು ಉತ್ಕೃಷ್ಟವಾದ ಹಾಗೂ ಬೆಲೆ ಯುಳ್ಳ ಮರಗಳನ್ನು ಹೊಂದಿರುವ ಅರಣ್ಯಗಳಿವೆ. ಉತ್ತರ ಕನ್ನಡ, ದಕ್ಷಿಣ ಕನ್ನಡ, ಚಿಕ್ಕಮಗಳೂರು, ಮೈಸೂರು, ಶಿವ ಮೊಗ್ಗ, ಬೆಳಗಾಂವ ಜಿಲ್ಲೆಗಳಲ್ಲಿ ಸಂಪದ್ಭರಿತವಾದ ಅರಣ್ಯ ಗಳಿವೆ. ಕಾಡನ್ನು ಕಾಳು ಬೆಳೆಸಲು ಪರಿವರ್ತಿಸಿದ್ದ ರಿಂದಾಗಿ ಉ. ಕನ್ನಡ ಹಾಗೂ ಶಿವಮೊಗ್ಗ ಜಿಲ್ಲೆಯ ವಿಪಿನ

ವಿಸ್ತಾರ ಅಷ್ಟರಮಟ್ಟಿಗೆ ಮೊಟಕಾಗಿದೆ. ೧೯೬೦ ರಿಂದೀಚೆಗೆ ಶಿವಮೊಗ್ಗ ಜಿಲ್ಲೆಯ ೧೪೮೦೦ ಹಾಗೂ ಉ. ಕನ್ನಡ ಜಿಲ್ಲೆಯ ೬೦೦೦೦ ಎಕರೆ ವನ್ಯ ಪ್ರದೇಶವನ್ನು ಬೇಸಾಯಕ್ಕಾಗಿ ಬಿಡುಗಡೆ ಮಾಡಲಾಗಿದೆ.

### ಕೋಷ್ಟಕ ೭

### ರಾಜ್ಯದ ಅರಣ್ಯ ವಿಸ್ತಾರ

( ಚದರು ಮೈಲುಗಳಲ್ಲಿ )

| ಜಿಲ್ಲೆ | ಭೂಕ್ಷೇತ್ರ | ಅರಣ್ಯಕ್ಷೇತ್ರ | ಶೇಕಡಾ |
|---|---|---|---|
| ಬೆಂಗಳೂರು........ | ೩೦೮೪ | ೪೨೨.೭೩ | ೧೩.೭ |
| ಬೆಳಗಾಂವ........ | ೫೩೮೦ | ೭೨೩.೮೨ | ೧೩.೪ |
| ಬಳ್ಳಾರಿ........... | ೩೮೨೫ | ೬೨೫.೨೮ | ೧೬.೩ |
| ಬೀದರ........... | ೨೨೦೯ | ೮೭.೨೩ | ೩.೯ |
| ವಿಜಾಪುರ........ | ೬೬೦೧ | ೩೩೫.೧೯ | ೫.೦ |
| ಚಿಕ್ಕಮಗಳೂರು | ೨೭೮೭ | ೯೫೯.೬೮ | ೨೫.೬ |
| ಶಿವಮೊಗ್ಗಾ........ | ೪೦೬೬ | — | — |
| ಚಿತ್ರದುರ್ಗ........ | ೪೧೮೫ | ೩೭೮.೩೪ | ೯.೦ |
| ಕೊಡಗು........... | ೧೫೭೧ | ೬೫೮.೫೬ | ೪೧.೪ |

| | | | |
|---|---|---|---|
| ಧಾರವಾಡ....... | ೫೭೯೬ | ೪೪೪.೧೧ | ೮.೩ |
| ಗುಲ್ಬರ್ಗಾ....... | ೬೫೭೪ | ೬೭೭.೭೨ | ೪.೨ |
| ಹಾಸನ........... | ೨೬೩೮ | ೧೯೭.೭೯ | ೭.೫ |
| ಕೋಲಾರ... .... | ೩೧೮೮ | ೩೪೦.೯೪ | ೧೦.೭ |
| ಮಂಡ್ಯ........... | ೧೭೧೭ | ೩೮.೭೫ | ೨.೦ |
| ಮೈಸೂರು........ | ೪೬೨೨ | ೧೩೯೫.೭೦ | ೩೦.೨ |
| ಉತ್ತರ ಕನ್ನಡ.... | ೩೯೬೪ | ೩೨೧೭.೮೪ | ೮೧.೨ |
| ರಾಯಚೂರು.... | ೫೫೯೧ | ೨೭೩.೫೬ | ೪.೭ |
| ದಕ್ಷಿಣಕನ್ನಡ.... | ೩೨೫೦ | ೧೮೫೭.೬೭ | ೫೭.೧ |
| ತುಮಕೂರು.... | ೪೦೯೩ | ೩೪೩.೧೯ | ೮.೩ |

ಕಳೆದ ೧೫ ವರುಷಗಳಲ್ಲಿ ರಾಜ್ಯದ ಅರಣ್ಯ ಇಲಾಖೆಯ ಕಾರ್ಯನಿರ್ವಹಣೆ ಆಧುನಿಕ ರೀತಿಯಲ್ಲಿ ಪರಿಷ್ಕೃತವಾಗಿದೆ. ನವೆಂಬರ ೧, ೧೯೫೬ರಂದು ನೂತನ ಮೈಸೂರು ರಾಜ್ಯ ಸ್ಥಾಪಾಯಿತು. ಅಂದು ಕೃತಕ ವನಾರೋಪಣ ಕ್ಷೇತ್ರವು ೧,೪೦,೯೬೦ ಎಕರೆಯಷ್ಟಿತ್ತು. ಕೃತಕ ವನಾರೋಪಣವೆಂದರೆ ಕಡಿದು ಹಾಕಲಾದ ವನಗಳ ಸ್ಥಳಗಳಲ್ಲಿ ಇಷ್ಟವಾದ ಜಾತಿಯ ಗಿಡಗಳನ್ನು ಹಚ್ಚುವದು. ಎರಡನೆ ಪಂಚವಾರ್ಷಿಕ ಯೋಜನೆಯ ಕೊನೆಗೆ ಈ ಕ್ಷೇತ್ರವು ೨,೬೦,೭೧೦ ಎಕರೆಗಳಷ್ಟಾಯಿತು. ತೃತೀಯ ಪಂಚವಾರ್ಷಿಕ ಯೋಜನಾಂತ್ಯಕ್ಕೆ ವನಾರೋಪಣವು ೪,೬೬,೪೮೦ ಎಕರೆ ಕ್ಷೇತ್ರವನ್ನಾವರಿಸಿತು. ದ್ವಿತೀಯ ಮತ್ತು

ತೃತೀಯ ಪಂಚವಾರ್ಷಿಕ ಯೋಜನಾವಧಿಯಲ್ಲಿ ೫೯೧೬೦ ಎಕರೆ ಬಂಜರು ಹಾಗೂ ಲಾಭದಾಯಕವಲ್ಲದ ಅರಣ್ಯಗಳಲ್ಲಿ ವಿವಿಧೋದ್ದೇಶಗಳನ್ನು ಪೂರೈಸಬಲ್ಲ ಹಾಗೂ ಬೇಗನೆ ಬೆಳೆಯುವ ಗಿಡಗಳ ವನಾರೋಪಣೆ ಮಾಡಲಾಯಿತು. ಇದಕ್ಕೆ ತಗಲಿದ ಖರ್ಚು ೮೮ ಲಕ್ಷ ರೂಪಾಯಿಗಳು. ೪೪.೫೦ ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಿ ೫೭೧೦೦ ಎಕರೆ ಪ್ರದೇಶಗಳಲ್ಲಿ ತೇಗಿನ ಮರಗಳನ್ನು ಬೆಳೆಸಲಾಯಿತು. ೨೧೪೮೩ ಎಕರೆ ಕ್ಷೇತ್ರದಲ್ಲಿ ಮಿದುಕಟ್ಟಿಗೆ ಗಿಡಗಳನ್ನು ನೆಡಲಾಯಿತು. ಸುಮಾರು ೧೦೦೦೦ ಎಕರೆ ಅರಣ್ಯ ಪ್ರದೇಶಗಳಲ್ಲಿಯ ಬಿದಿರು ಹೂಬಿಟ್ಟು ಹಾಳಾದುದರಿಂದ ಅಲ್ಲಿಯೂ ತೇಗಿನ ಮರಗಳನ್ನು ನೆಡಲಾಯಿತು. ರಾಜ್ಯದಲ್ಲಿರುವ ಕಾಗದದ ಕಾರ್ಖಾನೆಗಳಿಗೆ ಕಚ್ಚಾ ಮಾಲನ್ನು ಪೂರೈಸುವದಕ್ಕಾಗಿ ಉ. ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಮಿಶ್ರಜಾತಿಯ ನೀಲಗಿರಿ ಮರಗಳನ್ನು ನೆಡಲಾಯಿತು. ರಬ್ಬರಿನ ಆಮದನ್ನು ಆದಷ್ಟು ಕಡಿಮೆ ಮಾಡಲು ರಾಜ್ಯ ಸರಕಾರವು ಪ್ರತಿವರುಷ ೨೦೦೦ ಎಕರೆ ಪ್ರದೇಶದಲ್ಲಿ ರಬ್ಬರು ವನ ಬೆಳೆಸುವ ಯೋಜನೆಯನ್ನು ಹಮ್ಮಿಕೊಂಡಿದೆ. ಗೇರುಬೀಜಗಳಿಗೆ ವಿದೇಶಿ ಪೇಟೆಗಳಲ್ಲಿ ವಿಶೇಷ ಬೇಡಿಕೆಯಿರುವದನ್ನು ಗಮನಿಸಿ ೧೯೬೪-೬೫ನೇ ವರುಷದ ಕೊನೆಗೆ ೩೧೮೦೦ ಎಕರೆ ಅರಣ್ಯಕ್ಷೇತ್ರದಲ್ಲಿ ಗೇರು ಗಿಡಗಳನ್ನು ಊರಲಾಯಿತು. ೧೯೬೫-೬೬ರಲ್ಲಿ ಮತ್ತೆ ೮೦೦೦ ಎಕರೆ ಕ್ಷೇತ್ರದಲ್ಲಿ ಗೇರು ಕೃಷಿ ನಡೆಯಿತು. ಲೆವೆಂಡರ ಸುವಾಸಿತ ಸತ್ವಕ್ಕಾಗಿ ಹೆಸರು ಪಡೆದ ಲಿನೊಲಾ ವನಸ್ಪತಿಯ ಕೃಷಿ

ಪಡುವ ಗುತ್ತಿಗೆ ಕರ್ನಾಟಕ ರಾಜ್ಯ ಪಡೆದಿದೆ. ಇಲ್ಲಿಯ ವರೆಗೆ ಸುಮಾರು ೨೫೦೦ ಎಕರೆ ಪ್ರದೇಶಕ್ಕೂ ಮಿಕ್ಕಿ ಈ ವನ ಸ್ಪತ್ತಿಯು ಸಾಗುವಳಿಯಾಗಿದೆ. ಮೈಸೂರು ಮತ್ತು ಶಿವಮೊಗ್ಗ ಯಲ್ಲಿರುವ ಗಂಧದ ಎಣ್ಣೆಯ ಕಾರ್ಖಾನೆಗಳು ಅಮೂಲ್ಯ ವಿದೇಶಿ ವಿನಿಮಯವನ್ನು ದೇಶಕ್ಕೆ ಗಳಿಸಿಕೊಡುತ್ತವೆ. ಹೀಗಾಗಿ ಗಂಧವೃಕ್ಷಾಭಿವೃದ್ಧಿಗೂ ವಿಶೇಷ ಗಮನ ನೀಡಲಾಗಿದೆ. ರಾಜ್ಯ ದಲ್ಲಿ ಹಾಗೂ ಅಕ್ಕಪಕ್ಕದ ಅರಣ್ಯಗಳಲ್ಲಿ ದೊರೆಯುವ ಎಲ್ಲ ಗಂಧದ ಕಟ್ಟಿಗೆಗಳನ್ನೂ ಬಳಸಿಕೊಳ್ಳುವ ಉದ್ದೇಶದಿಂದ ಶಿವ ಮೊಗ್ಗಾದ ಗಂಧದ ಎಣ್ಣೆಯ ಕಾರ್ಖಾನೆಯನ್ನು ವಿಸ್ತರಿಸ ಲಾಗಿದೆ. ಮೈಸೂರಿನ ಗಂಧದ ಕಾರ್ಖಾನೆಯಲ್ಲಿ ಆಧುನಿಕ ಯಂತ್ರ ಸನ್ನಾಹ ಸ್ಥಾಪಿಸಲಾಗಿದೆ.

೧೯೬೮-೬೯ರಲ್ಲಿ ರಾಜ್ಯದ ಅರಣ್ಯ ಇಲಾಖೆ ಕೈಕೊಂಡ ತೋಪಿನ ವಿಸ್ತರಣೆಯ ವಿವರ ಕೆಳಗಿನಂತಿದೆ.

| | | |
|---|---|---|
| ತೇಗು............... | ೧,೮೧,೧೯೨ | ಎಕರೆಗಳು |
| ಉರುವಲ .......... | ೨,೦೮,೮೭೯ | ,, |
| ನೀಲಗಿರಿ ........... | ೧,೦೦,೦೦೦ | ,, |
| ಗೇರು ................ | ೩೦,೭೬೨ | ,, |
| ಮೆದುಕಟ್ಟಿಗೆ........ | ೨೬,೫೪೦ | ,, |
| ಕೋಕೋ........... | ೫,೦೦೦ | ,, |

ರಬ್ಬರ...................... ೪೮೭೨ ಎಕರೆಗಳು

ಬಸ್ಸಿರ ಡೆಲ್ಲಿ ಜೈನ... ೧೩೦೦ ,,

ವನ್ಯಜೀವಿಗಳ ಸಂರಕ್ಷಣೆಗಾಗಿ ವಿವಿಧ ಕಾನೂನುಗಳು ಜಾರಿಯಲ್ಲಿವೆ. ವನ್ಯಜೀವಿಗಳ ಪ್ರಜೋತ್ಪಾದನ ಪ್ರದೇಶಗಳ ಶಿಕಾರಿಯನ್ನು ಪ್ರತಿಬಂಧಿಸಲಾಗಿದೆ. ಬೆಳೆಗಳ ಸಂರಕ್ಷಣೆಯ ನೆಪದಲ್ಲಿ ವನ್ಯ ಪ್ರಾಣಿಗಳ ವಧೆಯಾಗದಂತೆ ನೋಡಿಕೊಳ್ಳಲಾಗುತ್ತಿದೆ. ವನ್ಯಜೀವಿಗಳ ಬಗೆಗೆ ವಿಶೇಷ ಸಂಶೋಧನೆ ನಡೆಯುತ್ತಲಿದೆ. ರಾಜ್ಯದಲ್ಲಿ ನಾಲ್ಕು ಅಭಯಾರಣ್ಯ (ಬೇಟೆ ನಿಷಿದ್ಧ ವನ್ಯಪ್ರಾಣಿಧಾಮ)ಗಳಿವೆ. ಬಂಡಿಪುರ ಅಭಯಾರಣ್ಯ ಜಾಗತಿಕ ಪ್ರಸಿದ್ಧಿ ಪಡೆದಿದೆ. ಚಿಕ್ಕಮಗಳೂರಿನಿಂದ ೨೫ ಮೈಲು ದೂರವಿರುವ ಮುಥೋಡಿ ಪ್ರಾಣಿಧಾಮವು ಬಾಬಾ ಬುಡನ್‌ಗಿರಿ ಶ್ರೇಣಿಯಲ್ಲಿದ್ದು ಕಾಡುಕೋಣ, ಸಾರಂಗ, ಹಾಗೂ ನಾನಾ ಬಗೆಯ ಜಿಗರೆಗಳು ಇಲ್ಲಿ ಅಧಿಕ ಪ್ರಮಾಣದಲ್ಲಿ ನೋಡಲು ಸಿಗುತ್ತವೆ. ನಾಗರಹೊಳೆಯ ವನ್ಯ ಪ್ರಾಣಿಧಾಮವು ಕೊಡಗು ಜಿಲ್ಲೆಯಲ್ಲಿ ಹುಣಸೂರಿನಿಂದ ೪೦ ಮೈಲು ದೂರದಲ್ಲಿದೆ. ಪ್ರವಾಸಿಕರ ಅನುಕೂಲತೆಗಾಗಿ ಸುಸಜ್ಜಿತವಾದ ವಸತಿಗೃಹಗಳನ್ನೂ ಸಂಚಾರಕ್ಕಾಗಿ ಆನೆಗಳನ್ನೂ ಇಡಲಾಗಿದೆ. ಆನೆ, ಕಾಡುಕೋಳಿ, ಸಾರಂಗ, ಚಿರತೆ, ಕರಡಿ, ತೋಳ, ಕಾಡುಹಂದಿ, ಪಾರಿವಾಳ, ಬಾತುಕೋಳಿ ಮೊದಲಾದವನ್ನು ಇಲ್ಲಿ ನೋಡಬಹುದು. ಉತ್ತರ ಕನ್ನಡ ಜಿಲ್ಲೆಯ ಸಮೃದ್ಧ ಕಾಡಿನಲ್ಲಿರುವ ದಾಂಡೇಲಿ ಅಭಯಾರಣ್ಯ ೭೫ ಚದರು ಮೈಲು

ಕ್ಷೇತ್ರವನ್ನು ವ್ಯಾಪಿಸಿದೆ. ಆನೆ, ಕಾಡುಕೋಣ, ಕಾಡುಹಂದಿ, ಕಾಡುಕೋಳಿ ಮೊದಲಾದವು ಇಲ್ಲಿ ವಿಪುಲವಾಗಿ ನೋಡಲಿಕ್ಕೆ ಸಿಗುತ್ತವೆ. ಸುಸಜ್ಜಿತವಾದ ವಸತಿಗೃಹವಿದೆ. ಮಿಂಚೋಳಿ ಜಲಪಾತ, ಶಿಂಘೇರಿಯಲ್ಲಿಯ ಬಂಡೆಗಳು, ಕಾವಲಾಗುಹೆಗಳು, ಗುಂದದಲ್ಲಿರುವ ಜೋತಾಡುವ ಸೇತುವೆ ಮೊದಲಾದವು ದಾಂಡೇಲಿ ಪ್ರಾಣಿಧಾಮದಲ್ಲಿ ನೋಡತಕ್ಕ ಸ್ಥಳಗಳೆನಿಸಿವೆ. ಕುಳಗಿ ಹಾಗೂ ಕನಸಿದ್ದಾಗಳಲ್ಲಿಯ ವೀಕ್ಷಣಾಗೋಪುರಗಳಲ್ಲಿ ನಿಂತರೆ ಪ್ರಾಣಿಗಳು ಕೆರೆಗಳಲ್ಲಿ ನೀರು ಕುಡಿಯುವದನ್ನೂ ಕಾಣಬಹುದು. ಐತಿಹಾಸಿಕನಗರ ಶ್ರೀರಂಗ ಪಟ್ಟಣದಿಂದ ಮೂರು ಮೈಲಿನ ಮೇಲೆ ಕಾವೇರಿ ನದಿಯ ಮಧ್ಯದಲ್ಲಿರುವ ರಂಗನಥಿಟ್ಟು ದ್ವೀಪದಲ್ಲಿ ಪಕ್ಷಿಧಾಮವಿದೆ. ನಾನಾಜಾತಿಯ ಕೊಕ್ಕರೆ, ಕ್ರೌಂಚಪಕ್ಷಿ, ಮೀನ್‌ಚುಳ್ಳಿ ಮೊದಲಾದ ಪಕ್ಷಿಗಳು ಇಲ್ಲಿ ನೋಡಲು ಸಿಗುತ್ತವೆ. ಪ್ರವಾಸಿಕರು ದೋಣಿಗಳಲ್ಲಿ ಕುಳಿತು ಪಕ್ಷಿಧಾಮದ ಸುತ್ತಲೂ ವಿಹರಿಸಲು ವ್ಯವಸ್ಥೆ ಮಾಡಲಾಗಿದೆ.

## ಕೋಷ್ಟಕ ೮

## ರಾಜ್ಯದಲ್ಲಿರುವ ಅಭಯಾರಣ್ಯಗಳು

| ಅಭಯಾರಣ್ಯಗಳು | ಜಿಲ್ಲೆ | ಸ್ಥಾಪನೆ | ವಿಸ್ತಾರ ಚ.ಮೈಲು |
|---|---|---|---|
| ವೇಣುಗೋಪಾಲ.... | ಮೈಸೂರು | ೧೯೪೧ | ೭೮೮.೪೮೨ |

| | | | |
|---|---|---|---|
| ಬಂಡೀಪುರ............ | ಮೈಸೂರು | ೧೯೪೧ | ೨೧.೮೫೮ |
| ಮುತ್ತೋಡಿ ........... | ಚಿಕ್ಕಮಗಳೂರು | ೧೯೪೧ | ೬೧.೨೯೦ |
| ದಾಂಡೇಲಿ ....... | ಉತ್ತರಕನ್ನಡ | ೧೯೪೫ | ೬೫.೮೨೦ |
| ನಾಗರಹೊಳೆ........ | ಕೊಡಗು | ೧೯೫೫ | ೧೧೧.೦೦೦ |
| ದೇವರಾಜದ್ವೀಪ.... | ಮೈಸೂರು | ೧೯೪೦ | ೧೫ ಎಕರೆ |
| ರಂಗನತಿಟ್ಟು–<br>ಪಕ್ಷಿಧಾಮ........ | ಮೈಸೂರು | ೧೯೪೦ | ೬೬.೧೬೦ |
| ಗಂದೆಹೊಸಹಳ್ಳಿ–<br>ಪಕ್ಷಿಧಾಮ ....... | ಮೈಸೂರು | ೧೯೪೦ | ೮೬.೨೩೦ |
| ಹುಲಿ ಸಂರಕ್ಷಿತ–<br>ಪ್ರದೇಶ............ | ಶಿವಮೊಗ್ಗಾ | | ೧೨೬.೬೫೦ |
| ಹುಲಿ ಸಂರಕ್ಷಿತ–<br>ಪ್ರದೇಶ ....... ...<br>[ ೧೬ ಭಾಗಗಳು.<br>ಒಂದೊಂದು ೫೦ರಿಂದ<br>೧೦೦ ಎಕರೆಗಳ ವರೆಗೆ] | ಮೈಸೂರು | | |
| ವನ್ಯಮೃಗ–<br>ಸಂರಕ್ಷಿತ ಪ್ರದೇಶ | ಮೈಸೂರು,<br>ಶಿವಮೊಗ್ಗಾ,<br>ಚಿಕ್ಕಮಗಳೂರು | | ೨೩೮.೫೧೦ |

ಬಂಜರು ಹಾಗೂ ಲಾಭದಾಯಕವಲ್ಲದ ವನ್ಯಕ್ಷೇತ್ರಗಳಲ್ಲಿ ವೈಜ್ಞಾನಿಕ ಮರಗಳ ಸಾಗುವಳಿ ಮಾಡಿ ಉತ್ಪತ್ತಿದಾಯಕ ಅರಣ್ಯಕ್ಷೇತ್ರವನ್ನು ಹೆಚ್ಚಿಸುವದು, ಅರಣ್ಯಸಂರಕ್ಷಣೆ, ಅರಣ್ಯ ಸಂಶೋಧನೆ, ವನ್ಯ ಸಂಪತ್ತಿನ ಸರ್ವೇಕ್ಷಣೆ, ಬೆಲೆಬಾಳುವ ಮರಗಳ ಲೆಕ್ಕಾಚಾರ, ಅರಣ್ಯಮಾರ್ಗಗಳ ರಚನೆ, ವನ ಹಾಗೂ ವನ್ಯಮೃಗಗಳ ಮೇಲೆ ಆಕ್ರಮಣ ತಡೆಯುವದು, ಅರಣ್ಯ ಪ್ರದೇಶದಲ್ಲಿ ವ್ಯಾವಸಾಯಿಕ ಉದ್ಯಮಗಳ ಪ್ರಸರಣೆಯನ್ನು ತಡೆಯುವದು ಇವೇ ಮುಂತಾದ ಕ್ಷೇತ್ರಗಳಲ್ಲಿ ಇನ್ನೂ ಹೆಚ್ಚಿನ ಗಟ್ಟಿ ಕಾರ್ಯ ನಡೆಯಬೇಕಾಗಿದೆ. ಈ ದಿಶೆಯಲ್ಲಿ ರಾಜ್ಯದ ಅರಣ್ಯ ಇಲಾಖೆ ಹಾಗೂ ಇತ್ತೀಚೆಗೆ ಸ್ಥಾಪಿತವಾದ ರಾಜ್ಯದ ಅರಣ್ಯ ಕಾರ್ಪೊರೇಶನ್ ವಿಶೇಷ ಮುತುವರ್ಜಿ ವಹಿಸುವದು ರಾಜ್ಯದ ಆರ್ಥಿಕ ಪುರೋಭಿವೃದ್ಧಿಯ ದೃಷ್ಟಿಯಿಂದ ಅತ್ಯಂತ ಮಹತ್ವದ್ದಾಗಿದೆ ಎಂಬುದು ಸುವಿದಿತ.

# ೪. ವನ್ಯಮೃಗ ಸಂರಕ್ಷಣೆ

“ ಈ ಸಂತತಿ ಸಾವಿರವಾಗಲಿ ”

ಅರಣ್ಯ ಎಂಬುದು ಮರಗಳ ಒಂದು ಗುಂಪಿಗಿಂತಲ ಹೆಚ್ಚಾದುದು. ಅದು ಸಸ್ಯ ಮತ್ತು ಪ್ರಾಣಿ ಜೀವನ ಸಂಮಿಶ್ರಿತಲೋಕ. ಅರಣ್ಯ ಸಂರಕ್ಷಣೆಯಂತೆ ವನ್ಯಮೃ ಸಂರಕ್ಷಣೆಯೂ ಅರಣ್ಯಶಾಸ್ತ್ರದಲ್ಲಿಯ ಮಹತ್ವಪೂರ್ಣ ಅಧ್ಯಾಯ— ಅರ್ಥಪೂರ್ಣ ಅಧ್ಯಾಯವೂ ಹೌದು. ವ ಗಳಿದ್ದಲ್ಲಿ ವನ್ಯಮೃಗ, ವನ್ಯಮೃಗಗಳಿದ್ದಲ್ಲಿ ವನ. ನೀರ ನಡೆ. ನೆಳಲು ಹಾಗೂ ನಾಲಿಗೆಗಾಗಿ ಅವು ಆಶ್ರಯಿಸುವದ ಕಾಡನ್ನೇ. ನೈಸರ್ಗಿಕ ರಕ್ಷಣೆ ಇಲ್ಲದಿದ್ದರೆ ಅವು ಬದುಕ ಲಾರವು. ನಿಸರ್ಗದ ಸಮತೋಲ ಕಾಯ್ದಿಡುವಲ್ಲಿ ತನ್ಮೂಲಕ ಮನುಷ್ಯ ಜೀವನ ಸುಗಮಗೊಳಿಸುವದರಲ್ಲಿ ವನ್ಯಮೃಗಗಳ ಅವಶ್ಯ. ಯಾವ ಒಂದು ಪ್ರಾಣಿಯೂ ಹೆಚ್ಚಾಗದಂತೆ ತಡೆ ಹಿಡಿಯುವದು ನಿಸರ್ಗ ನಿಯಮ. ಮಾನವ ಮೃಗಯಾ ವಿನೋದಕ್ಕಾಗಿಯೂ ದುರಾಶೆಯಿಂದಲೂ ಈ ಸಮತೋಲ ವನ್ನು ಕೆಡಿಸುತ್ತಲಿದ್ದಾನೆ. ಪಟ್ಟೆಹುಲಿಯ ನಿರಂತರ ಶಿಕಾರಿ ಯಿಂದಾಗಿ ಅವುಗಳ ಸಂತತಿ ಕ್ಷೀಣಿಸುತ್ತ ಬಂದಿದೆ. ಕಾಡು ಹಂದಿಯ ಸಂಖ್ಯೆ ಏರುತ್ತ ನಡೆದಿದೆ. ಕಾಡುಹಂದಿ ಹುಲಿಯ ಆಹಾರ. ಕಾಡುಹಂದಿಗಳು ಹೊಲಗದ್ದೆಗಳಿಗೆ ನುಗ್ಗಿ ಪೈರು

ಹಾಳು ಮಾಡುವದರಲ್ಲಿ ಹೆಸರಾದ ಪ್ರಾಣಿಗಳು. ಗದ್ದೆ-ಗೆಣಸಿನ ಬೆಳೆ ಇವಕ್ಕೆ ಬಲು ಇಷ್ಟ. ಹೀಗೆ ಇವು ಅಪಾರ ನಷ್ಟವುಂಟುಮಾಡುವದರಿಂದ ಮಾನವನ ಶತ್ರುಗಳೆನಿಸಿವೆ. ಹಾಗೆಯೇ ಕೆಲವು ವರುಷಗಳ ಹಿಂದೆ ಹಾವುಗಳನ್ನು ಹಿಡಿದು ಮದ್ರಾಸಿನ ಚರ್ಮದ ಕಾರ್ಖಾನೆಗೆ ರವಾನಿಸಿದುದರ ಪರಿಣಾಮವಾಗಿ ಇಲಿ-ಹೆಗ್ಗಣಗಳ ಹಾವಳಿ ಹೆಚ್ಚಾಯಿತು. ಪ್ರತ್ಯಕ್ಷವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ವನ್ಯಮೃಗಗಳು ಮಾನವಕುಲಕ್ಕೆ ನೀಡುವ ಸಹಕಾರ ಅಪಾರ. ಬೆಳೆದ ಬೆಳೆಗಳನ್ನು ಹಾಳು ಮಾಡುವ ಹಲವು ಕ್ರಿಮಿಕೀಟಕಗಳು ಹಾರುವ ಹಕ್ಕಿಗಳಿಗೆ ಆಹಾರ. ಇಲಿ, ಹೆಗ್ಗಣ ಮುಂತಾದ ವಿನಾಶಕಾರಿ ಪ್ರಾಣಿಗಳನ್ನು ನರಿ. ಗೂಬೆ, ಹಾವು ಕೊಂದು ತಿನ್ನುತ್ತವೆ. ಕೆಲವು ಕಾಡು ಮೃಗಗಳು ಹಸಿರು ಗಿಡ ಯಾವಾಗಲೂ ನೆಲವನ್ನು ಮುಚ್ಚಿರುವಂತೆ ನೋಡಿಕೊಳ್ಳುವದರಿಂದ ಆ ಪ್ರದೇಶದಲ್ಲಿ ನೀರಿನ ಸೆಲೆ ಬತ್ತದೆ ಇರುತ್ತದೆ. ಪ್ರವಾಹಗಳನ್ನು ತಡೆಗಟ್ಟುವ ಅಡ್ಡಕಟ್ಟನ್ನು ನೀರಿಗೆ ಅಡ್ಡವಾಗಿ ಒಡ್ಡುವದಂತೆ ಬೀವರ ಎಂಬ ಪ್ರಾಣಿ. ಆನೆಗಳು ಹಿಂದಿನಿಂದಲೂ ಮನುಷ್ಯನಿಗೆ ಉಪಯುಕ್ತ ಪ್ರಾಣಿ. ಹಿಂದೆ ರಣರಂಗದಲ್ಲಿ ಆನೆಗಳ ಬಲವನ್ನೇ ಉಪಯೋಗಿಸಲಾಗುತ್ತಿತ್ತು. ಕಾಡಾನೆಗಳನ್ನು ಪಳಗಿಸಿ ಮಠಮಾನ್ಯಗಳಲ್ಲಿ ಗೌರವ ಸಂಕೇತವಾಗಿ ಇಡುವ ಪದ್ಧತಿ ಇಂದಿಗೂ ಇದೆ. ಕಾಡುಗಳಲ್ಲಿ ಮರದ ದಿಮ್ಮಿಗಳನ್ನು, ನಾಟುಗಳನ್ನು, ತೊಲೆಗಳನ್ನು ಎಳೆಸಲು ಆನೆಯನ್ನು ಬಳಸುತ್ತಾರೆ. ಆನೆಯ ದಂತಕ್ಕೆ ಹೆಚ್ಚಿನ ಬೆಲೆ ಇದೆ. ದಂತವನ್ನು

ವಿಶೇಷತಃ ಕರ-ಕುಶಲ ವಸ್ತುಗಳ ತಯಾರಿಕೆಯಲ್ಲಿ ಬಳಸಿ ಕೊಳ್ಳಲಾಗುತ್ತಿದೆ. ವನ್ಯಮೃಗಗಳಿರುವ ಸುಂದರ ವಿಪಿನ ಪ್ರದೇಶ ಪ್ರವಾಸೋದ್ಯಮದ ಅಭಿವೃದ್ಧಿಗೂ ಸಹಕಾರಿ. ಮಾನವನ ಆಕ್ರಮಣ, ನಿರ್ದಯ ಮತ್ತು ಇನ್ನಿತರ ಪರಿಸರ ಮಾಲಿನ್ಯ ಇವು ವನ್ಯಸಂತತಿಯ ನಿರೋಧಕಗಳು. ಇವು ನಮ್ಮ ದೇಶದಲ್ಲಿ ಒದಗದಿರಲೆಂದೇ ವನ್ಯ ಜೀವಿಗಳಲ್ಲಿ ಆಸಕ್ತಿಯುಳ್ಳವ ರೆಲ್ಲರ ಇರಾದೆ. ವನ್ಯ ಮೃಗರಕ್ಷಣೆ ಮಾನವನ ಮಾನವೀಯ ಪೂರ್ಣಪ್ರಜ್ಞೆಗೊಂದು ಸವಾಲು. ಪ್ರಾಣಿಗಳ ವಿಷಯದಲ್ಲೂ ಮಾನವನ ಮಾನವೀಯ ಪ್ರಜ್ಞೆಯನ್ನು ನೆನಪು ಮಾಡಿ ಕೊಡಲು ಭಾರತದಲ್ಲಿ ಪ್ರತಿವರ್ಷ ಅಕ್ಟೋಬರ ತಿಂಗಳ ಮೊದಲನೆ ವಾರದಲ್ಲಿ ವನ್ಯ ಮೃಗರಕ್ಷಣಾಸಪ್ತಾಹ ಆಚರಿಸ ಲಾಗುತ್ತಿದೆ.

ಒಂದು ಪ್ರದೇಶದಲ್ಲಿ ವಾಣಿಜ್ಯ, ಶಿಕಾರಿ ಅಥವಾ ಇನ್ನಾವುದೇ ದೃಷ್ಟಿಯಿಂದ ಯಾವುದಾದರೂ ನಿರ್ದಿಷ್ಟ ಪ್ರಾಣಿಯ ಬೇಟೆ ಸತತವಾಗಿ ಸಾಗಿದರೆ ಹಲವಾರು ಶತಕಗಳಲ್ಲಿ ಆ ಪ್ರಾಣಿ ಸಂಪೂರ್ಣವಾಗಿ ಅಳಿದುಹೋಗುವ ಸಂಭವವಿದೆ. ತನ್ನ ಬೇಟೆಗೆ ಬಲಿಯಾದ ಪ್ರಾಣಿ ಸಾವಿನ ಸಂಕಟದಲ್ಲಿ ನರಳು ವದನ್ನು ಕಂಡು ಆನಂದಿಸುವದು ಮನುಷ್ಯನಿಗೆ ಮಾತ್ರ ಮೀಸಲಾದ ಕಲೆ. ಇಷ್ಟು "ನಾಗರಿಕತೆ" ವನ್ಯಪ್ರಾಣಿಗಳಿಗಿನ್ನೂ ಬಂದಿಲ್ಲ. ಸುಮಾರು ೧೧ ಸಾವಿರ ವರುಷಗಳ ಹಿಂದೆ ಅಲಸ್ಕಾ ದಲ್ಲಿ ಜಿರಾಫೆಗಳಷ್ಟು ಎತ್ತರ ಪ್ರಾಣಿಗಳು, ಒಂಟೆಗಳು ಇದ್ದವು.

ಈಗ ಅವು ಮಾಯವಾಗಿವೆ. ಆಫ್ರಿಕಾದ ಅರಣ್ಯಗಳಲ್ಲಿ ವಾಸಿಸುತ್ತಿದ್ದ ಒಂದು ತೆರನಾದ ಜಿಬ್ರಾವನ್ನು ಹೀಗೆ ಸತತವಾಗಿ ಬೇಟೆಯಾಡಿದ ನಿಮಿತ್ತ ಯಾವರಿಗೆ ಕೂಡ ಒಂದು ಪ್ರಾಣಿ ಸಿಗದಂತಾಗಿ ೧೮೩೩ರ ವೇಳೆಗೆ ಆ ಸಂತತಿಯ ಸುಳಿವೇ ಇಲ್ಲದಂತಾಯಿತು. ೧೯೩೦-೩೧ರಲ್ಲಿ ೪೦,೦೦೦ ತಿಮಿಂಗಿಲಗಳನ್ನು ಅವುಗಳಿಂದ ಒದಗುವ ಅಮೂಲ್ಯ ಎಣ್ಣೆಗಾಗಿ ಕೊಲ್ಲಲಾಯಿತಂತೆ! ಪೂರ್ವದಲ್ಲಿ ಕಾಡುಕೋಣಗಳ ಸಂಖ್ಯೆ ೬೦,೦೦,೦೦೦ ಇತ್ತೆಂದು ಅಂದಾಜಿದೆ. ಮಾಂಸ, ಚರ್ಮ ಮತ್ತು ಬೇಟೆಯ ಶೋಕಿಗಾಗಿ ಇವುಗಳನ್ನು ಕೊಲ್ಲುತ್ತ ಬಂದಂತೆ ಇವುಗಳ ಸಂಖ್ಯೆಯೂ ಕಡಿಮೆಯಾಗುತ್ತ ಬಂದು ಇವುಗಳ ಸಂತತಿ ನಿರ್ನಾಮವಾಗುವ ಹಂತದಲ್ಲಿತ್ತು. ಆದರೆ ಈಗ ಕಾನೂನಿನ ರಕ್ಷಣೆ ದೊರೆತು ಇವುಗಳ ಸಂಖ್ಯೆ ಕೊಂಚ ಏರುತ್ತ ಬಂದಿದೆ. ಮಿಣ ಮಿಣನೆ ಮಿರುಗುವ ಕೆಂಗೆಂದು ಬಣ್ಣದ ದೇಹ, ಮಾಟವಾದ ಹಾಗೂ ಪ್ರಮಾಣಬದ್ಧವಾದ ಅಂಗ ಸೌಷ್ಠವ, ಶ್ರೀಮಂತಿಕೆಯ ಠೀವಿ ಹಾಗೂ ಬೆಡಗಿನ ನಡಗೆಯ ಕೆಂಪುಸಾರಂಗ ಕಣ್‌ಮನಗಳಲ್ಲಿ ತುಂಬಿ ನಿಲ್ಲುವ ಪ್ರಾಣಿ. ಯುರೋಪದ ಅರಣ್ಯಗಳಲ್ಲಿ ಇವುಗಳ ಸಂಖ್ಯೆ ಹೆಚ್ಚು. ಇದರ ಮಾಂಸ ಬಹು ರುಚಿಯಾದುದೆಂದು ಹೆಸರಾಗಿದೆ. ಯುರೋಪ ಮುಂತಾದೆಡೆಗಳಲ್ಲಿ ಇದರ ಬೇಟೆ ಅವ್ಯಾಹತವಾಗಿ ನಡೆಯುತ್ತದೆ. ಹೀಗಾಗಿ ಇದರ ವಂಶ ಕ್ಷೀಣಿಸುತ್ತಲಿದೆ. ಶಿಕಾರಿ, ವನ್ಯಮೃಗಗಳ ವಾಸಸ್ಥಾನಗಳನ್ನು ಆಕ್ರಮಿಸುವದು ಮತ್ತು ತನ್ನ ಉಪಯೋಗಕ್ಕೆಂದು ಧ್ವಂಸ ಮಾಡುವದು ಇವು

ಗಳಿಂದಾಗಿ ೨೦೦೦ ವರುಷಗಳಿಂದೀಚೆಗೆ ಸುಮಾರು ೧೦೬ ರೀತಿಯ ವನ್ಯಮೃಗಗಳು ನಿರ್ನಾಮವಾಗಿವೆ ಎಂಬುದು ವನ್ಯ ಮೃಗಾಭ್ಯಾಸಿಗಳ ಅಂದಾಜು. ನೈಸರ್ಗಿಕ ಕಾರಣಗಳಿಂದಲೂ ಪ್ರಾಣಿಗಳ ನಾಶವಾಗುತ್ತದೆ. ಹವೆಯ ವೈಪರೀತ್ಯ, ರೋಗ-ರುಜಿನಗಳು, ತಮ್ಮತಮ್ಮೊಳಗೆ ಹೋರಾಟ, ಸಮುದ್ರಮಟ್ಟ ದಲ್ಲಾದ ವ್ಯತ್ಯಾಸ ಇವುಗಳಿಂದಲೂ ಹಲವು ಪ್ರಾಣಿಗಳು ಮರೆ ಯಾಗಿವೆ, ಮರೆಯಾಗುತ್ತಲಿವೆ.

ಪ್ರತಿಯೊಂದು ಪ್ರಾಣಿಗೂ ಪ್ರತ್ಯೇಕ ರಕ್ಷಣೆ ನೀಡುವುದು ನಿರೀಕ್ಷಿಸಲಾರದ ಮಾತು. ಹಾಗೆ ಯೋಜಿಸುವದು ಸಾ ರ್ಥಕವೂ ಅಲ್ಲ, ಶಾಸ್ತ್ರೀಯವೂ ಅಲ್ಲ. ವನ್ಯಮೃಗ ರಕ್ಷಣೆ ಅವು ವಾಸಿಸುವ, ಆಹಾರ ಅರಸುವ ಹಾಗೂ ವಿಶ್ರಮಿಸುವ ಸಮಗ್ರ ಕ್ಷೇತ್ರದಿಂದ ಆರಂಭವಾಗಬೇಕು. ಇದರ ಪ ಣಾಮವೇ ರಾಷ್ಟ್ರೀಯ ಉದ್ಯಾನ [ಅಭಯಾರಣ್ಯ]. ೧೮೭೨ ರಲ್ಲಿ ಸ್ಥಾಪಿತವಾದ ೮೯೩೩ ಚ. ಕಿ. ಮೀ. ವಿಸ್ತೀರ್ಣದ ಯೆಲ್ಲೋ ಸ್ಟೋನ್ ಪಾರ್ಕ ಎಂಬುದು ವಿಶ್ವದಲ್ಲಿಯೇ ಅತ್ಯಂ ಪ್ರಾಚೀನವಾದ ರಾಷ್ಟ್ರೀಯ ಉದ್ಯಾನ. ಇದು ಅಮೇರಿ ಸಂಯುಕ್ತ ಸಂಸ್ಥಾನದಲ್ಲಿದೆ. ಅಮೇರಿಕ ಸಂಯುಕ್ತ ಸಂಸ್ಥಾನದಲ್ಲಿ ಇಂದು ೨೯ ರಾಷ್ಟ್ರೀಯ ಉದ್ಯಾನಗಳಿವೆ. ಜಗತ್ಪ್ರಸಿದ್ಧ ರಾಷ್ಟ್ರೀಯ ಉದ್ಯಾನ ಆಫ್ರಿಕದಲ್ಲಿದೆ. ೧೮೯ ರಲ್ಲಿ ಈ ಕ್ರೂಗರ್ ರಾಷ್ಟ್ರೀಯ ಉದ್ಯಾನ ಸ್ಥಾಪಿತವಾಯಿತು. ಇದರ ವಿಸ್ತಾರ ೨೦೭೨೦ ಚ. ಕಿ. ಮೀಟರುಗಳು. ಇ

ಸಿಂಹ, ಚಿರತೆ, ಕಾಡಾನೆ, ಜಿರಾಫೆ, ಜೀಬರಗತ್ತೆ, ಸಾರಂಗ, ಜಿಂಕೆ, ಮುಂತಾದವು ನಿರ್ಭಯವಾಗಿ ವಿಹರಿಸುತ್ತವೆ. ಮೊಸಳೆಗಳು ತುಂಬಿರುವ ನದಿಯಿದೆ. ಕಾರಿನ ಎಲ್ಲ ಭಾಗಗಳನ್ನು ಭದ್ರಪಡಿಸಿ ಒಳಗೆ ಕುಳಿತರೆ ಸಿಂಹಗಳನ್ನೂ ಕೂಡ ಸಮೀಪದಿಂದ ನೋಡಬಹುದಂತೆ! ಕೆನಡಾದಲ್ಲಿ ಅತ್ಯಂತ ಸುಂದರವಾದ ಉದ್ಯಾನಗಳಿವೆ. ಸೋವಿಯತ್ ಒಕ್ಕೂಟದಲ್ಲಿ ವನ್ಯಮೃಗಗಳನ್ನು ಹೆಚ್ಚು ಎಚ್ಚರಿಕೆ ಮತ್ತು ಶ್ರದ್ಧೆಯಿಂದ ನೋಡಿಕೊಳ್ಳಲಾಗುವದು. ಸೋವಿಯತ್ ದೇಶ ವನ್ಯಮೃಗಗಳ ಸಂರಕ್ಷಣೆಗಾಗಿ ವಿಶೇಷ ಶಾಸನಗಳನ್ನು ಜಾರಿಗೆ ತಂದಿದೆ ಮತ್ತು ದೇಶದ ಒಂದು ತುದಿಯಿಂದ ಮತ್ತೊಂದು ತುದಿಯವರೆಗೆ ವನ್ಯಮೃಗಗಳ ರಕ್ಷಣೆಗಾಗಿಯೇ ಅನೇಕ ಅರಣ್ಯಧಾಮಗಳನ್ನು ನಿರ್ಮಿಸಲಾಗಿದೆ. ರಾಷ್ಟ್ರೀಯ ಉದ್ಯಾನಗಳಲ್ಲಿ ಬೇಟೆಯನ್ನು ಶಾಸನೋಲ್ಲೇಖಿತವಾಗಿ ನಿಷೇಧಿಸಲಾಗುತ್ತಿದೆ. ನೈಸರ್ಗಿಕ ಪರಿಸರದಲ್ಲಿ ವನ್ಯ ಮೃಗಗಳ ಕ್ಷೇಮಾಭಿವೃದ್ಧಿ ನಡೆಯುತ್ತಲಿರುವದು.

ಭಾರತದ ಅರಣ್ಯಗಳಲ್ಲಿ ಕಂಡುಬರುವ ವನ್ಯಮೃಗಗಳು ಹಲವಾರು. ನಮ್ಮ ವನ್ಯಮೃಗ ಸಂಪತ್ತು ಶ್ರೀಮಂತ ವೈವಿಧ್ಯತೆಯನ್ನೂ ಮತ್ತು ವರ್ಣಮಯ ವೈಭವವನ್ನೂ ಹೊಂದಿರುವದು ಪ್ರಶಂಸನಾರ್ಹವಾದದ್ದು. ಅತ್ಯಾಕರ್ಷಕವಾದ ಮೈಮಾಟದ ಜಿಂಕೆಗಳು, ಭಾರತದಲ್ಲಿವೆ. ನಮ್ಮ ದೇಶದ ಆನೆ ಆಫ್ರಿಕಾದ ಆನೆಗಳಿಗಿಂತಲೂ ನೋಡಲು ಹೆಚ್ಚು ಚಂದ.

ನಮ್ಮಲ್ಲಿಯ ಘೇಂಡಾಮೃಗ ಪ್ರಪಂಚದಲ್ಲಿರುವ ಆ ಜಾತಿಯ ಪ್ರಾಣಿಗಳಲ್ಲೆಲ್ಲ ಬೃಹತ್ ಪ್ರಾಣಿ. ಭಾರತದ ಕಾಡೆಮ್ಮೆ ಪ್ರಪಂಚದ ಎಲ್ಲ ಕಾಡೆಮ್ಮೆಗಳಿಗಿಂತ ದೊಡ್ಡದು. ಗುಜರಾತದಲ್ಲಿರುವ ಗಿರ್ ಅರಣ್ಯಪ್ರದೇಶದಲ್ಲಿರುವಂತಹ ಸಿಂಹಗಳು ಏಷ್ಯಾ ಖಂಡದಲ್ಲಿ ಇನ್ನೆಲ್ಲಿಯೂ ಕಂಡು ಬರುವದಿಲ್ಲ. ವಿವಿಧ ಗಾತ್ರದ, ವಿವಿಧ ಇಂಚರದ ನಯನ ಮನೋಹರ ಪಕ್ಷಿಕುಲ ಭಾರತದಲ್ಲಿ ಬೇಕಾದಷ್ಟಿವೆ. ಪ್ರಪಂಚದಲ್ಲಿ ಕಂಡು ಬರುವ ಪಕ್ಷಿಜಾತಿಗಳಲ್ಲಿ ಹತ್ತನೆ ಒಂದು ಭಾಗವು ಭಾರತದಲ್ಲಿದೆ. ಪಕ್ಷಿಗಳಿಲ್ಲದ ನಿಸರ್ಗ ನೀರಸ.

ಭಾರತದ ಸಂವಿಧಾನದಲ್ಲಿ ವನ್ಯಮೃಗರಕ್ಷಣೆ ಆಯಾ ರಾಜ್ಯದ ಹೊಣೆ ಎಂಬುದಾಗಿ ಉಲ್ಲೇಖಿಸಲಾಗಿದೆ. ವನ್ಯಮೃಗ ರಕ್ಷಣಾ ಕೇಂದ್ರಗಳನ್ನು ಆಯಾ ರಾಜ್ಯ ಸರಕಾರಗಳ ಅರಣ್ಯ ಶಾಖೆಗಳು ನೋಡಿಕೊಳ್ಳುತ್ತವೆ. ಕೆಲವು ರಾಜ್ಯಗಳಲ್ಲಿ ಅಭಯಾರಣ್ಯಗಳಿವೆ. ಅಲ್ಲಿ ಬೇಟೆ ನಿಷಿದ್ಧ. ಕಾದಿಟ್ಟ ಹಾಗೂ ರಕ್ಷಿತ ಅರಣ್ಯ ಪ್ರದೇಶಗಳಲ್ಲೂ ಬೇಟೆಗೆ ಆಸ್ಪದವಿಲ್ಲ. ಗುಜರಾತದ ಕಾಠೇವಾಡ್ ಪರ್ಯಾಯ ದ್ವೀಪದಲ್ಲಿರುವ ಗಿರ್ ಅರಣ್ಯ ಪ್ರದೇಶ ಭಾರತದ ಅತ್ಯಂತ ದೊಡ್ಡ ವನ್ಯಮೃಗ ರಕ್ಷಣಾಪ್ರದೇಶ. ರಾಷ್ಟ್ರೀಯ ಮೃಗವಾದ ಸಿಂಹವೇ ಇಲ್ಲಿಯ ಪ್ರಮುಖ ಆಕರ್ಷಣೆ. ಸುಮಾರು ೧೩೦೦ ಚದರು ಕಿಲೋ ಮೀಟರ ವಿಸ್ತಾರದಲ್ಲಿ ಹರಡಿರುವ ಗಿರ್ ಅರಣ್ಯವು ಭಾರತದಲ್ಲಿ ಸ್ಥಳೀಯ ವನ್ಯಮೃಗಗಳ ರಕ್ಷಣೆಗಾಗಿ ಮೀಸಲಾಗಿರಿಸಲಾದ

ಜೀವಶಾಸ್ತ್ರೀಯವಾಗಿ ಇನ್ನಂತೆಗೋ ಇರಗೊಡಿಸಲಾದ ಅತ್ಯಂತ ವಿಶಾಲವಾದ ಅರಣ್ಯ. ಒಮ್ಮೆ ಭಾರತದಲ್ಲಿದ್ದ ಸಮೃದ್ಧ ಮೃಗಸಂಪತ್ತಿನಲ್ಲಿ ಸೇರಿದ್ದ ಅನೇಕ ಜಾತಿಯ ಪ್ರಾಣಿಗಳ ಅಳಿದುಳಿದ ಸಂತತಿಗಳಿಗೆ ಈ ಮೃಗಧಾಮದಲ್ಲಿ ಆಶ್ರಯ ಸಿಕ್ಕಿದೆ. ಜಿಂಕೆ, ಕಡವೆ, ಭಾರತೀಯ ಹರಿಣ "ನೀಲ್ಗಾಯ್". ಕಾಡುಹಂದಿ ಮತ್ತು ಪ್ರಪಂಚದಲ್ಲಿ ಬೇರೆಲ್ಲೂ ಇಲ್ಲದಿರುವ ನಾಲ್ಕು ಕೋಡುಗಳುಳ್ಳ ಚಿಗರೆ ಇಲ್ಲಿವೆ. ಜಬ್ಬಲ್ಪುರದಿಂದ ೨೬೯.೯ ಕಿ. ಮೀ. ದೂರದಲ್ಲಿರುವ ಕನ್ಹಾ ರಾಷ್ಟ್ರೀಯ ಉದ್ಯಾನ ಭಾರತದ ವನ್ಯಮೃಗಗಳ ಶ್ರೇಷ್ಠ ತಾಣವಾಗಿದೆ. ಬಾರಾಸಿಂಘಾ ಎಂಬ ಜಿಂಕೆಗೆ ಇದು ಪ್ರಸಿದ್ಧ. ಭೂತಾನಿನ ಗಡಿ ಬಳಿಯಲ್ಲಿರುವ ಜಲ್ದಾಪಾರಾ ಪ್ರದೇಶದಲ್ಲಿ ಘೇಂಡಾ ಮೃಗಗಳಿವೆ. ಬೆಂಗಳೂರು—ಉದಕಮಂಡಲ ರಸ್ತೆಯ ಬಲಬದಿ-ಗಿರುವ ಬಂಡಿಪುರ ವನ್ಯಪ್ರಾಣಿಧಾಮವು ಭಾರತದಲ್ಲಿಯ ಉತ್ಕೃಷ್ಟ ವನ್ಯಪ್ರಾಣಿಧಾಮಗಳಲ್ಲಿ ಒಂದಾಗಿದೆ. ೧೯೪೧ ರಲ್ಲಿ ನಿರ್ಮಿಸಲ್ಪಟ್ಟ ೨೨ ಚದರು ಮೈಲು ವಿಸ್ತಾರವಾಗಿರುವ, ಉಪವನಗಳ ನಗರ ಮೈಸೂರು ಹಾಗೂ ಗಿರಿಧಾಮಗಳ ರಾಣಿ ಉದಕಮಂಡಲದಿಂದ ಸಮಾನ ಅಂತರದಲ್ಲಿರುವ ಈ ವನ್ಯಪ್ರಾಣಿಧಾಮವು ವನ್ಯಪ್ರಾಣಿಗಳ ಹಾಗೂ ನಿಸರ್ಗಪ್ರೇಮಿಗಳ ಸ್ವರ್ಗ ಎನ್ನಬಹುದು. ಈ ಪ್ರಾಣಿಧಾಮದಲ್ಲಿ ದಕ್ಷಿಣ ಭಾರತದಲ್ಲಿಯ ಎಲ್ಲ ಪ್ರಾಣಿಗಳನ್ನು ಕಾಣಬಹುದು. ಆನೆ, ಕಾಡುಕೋಣ, ಸಾರಂಗ, ಚಿಗರೆ, ಕಾಡುಹಂದಿ ಮೊದಲಾದವು ಪ್ರೇಕ್ಷಕರಿರುವುದನ್ನು ಗಮನಿಸದೆ ತಮ್ಮ ಪಾಡಿಗೆ ಕೊಡದನೆ

ಸ್ವಚ್ಛಂದವಾಗಿ ವಿಹರಿಸುತ್ತವೆ. ವಸತಿಗೃಹಗಳ ಸುತ್ತ ಜಿಗರೆಗಳ ಗುಂಪು ಸಾಗುವುದನ್ನು ನೋಡುವುದೇ ಪ್ರವಾಸಿಗರ ಕಣ್ಣಿಗೆ ಹಬ್ಬ. ಅಂದ–ಚೆಂದದ ಗರಿಗಳುಳ್ಳ ಹಾಗೂ ಕರ್ಣಾನಂದಕರವಾಗಿ ಕೂಗುವ ನಾನಾಬಗೆಯ ಪಕ್ಷಿಗಳೂ ಇಲ್ಲಿವೆ. ಸಮುದ್ರ ಮಟ್ಟದಿಂದ ೧೦೭೫–೯೫೭ ಮೀಟರ ಎತ್ತರದಲ್ಲಿರುವ ಈ ಪ್ರದೇಶ ರಮಣೀಯವಾದ ನೀಲಗಿರಿ ಪರ್ವತದ ಹಿನ್ನೆಲೆಯಲ್ಲಿ ಬಹು ಸುಂದರವಾಗಿ ಕಾಣುವದು. ದಾಂಡೇಲಿ, ನಾಗರಹೊಳೆ, ಮುಥೋಡಿ ಇವು ನಮ್ಮ ರಾಜ್ಯದಲ್ಲಿರುವ ಇನ್ನಿತರ ಮುಖ್ಯ ಅಭಯಾರಣ್ಯಗಳು. ರಂಗನತಿಟ್ಟದಲ್ಲಿ ಪಕ್ಷಿಧಾಮವಿದೆ.

ನಮ್ಮ ದೇಶದಲ್ಲಿ ವನ್ಯಮೃಗ ರಕ್ಷಣೆಯು ೧೮೮೭ ರಲ್ಲಿ ಪ್ರಾರಂಭವಾದರೂ ಈ ದಿಶೆಯಲ್ಲಿ ವಿಶೇಷ ಕಾರ್ಯಕ್ರಮಗಳು ಹಾಗೂ ಯೋಜನೆಗಳು ಹಮ್ಮಿಕೊಂಡಿದ್ದು ೧೯೫೨ ರಲ್ಲಿ ಭಾರತೀಯ ವನ್ಯಮೃಗ ಮಂಡಳಿ ಸ್ಥಾಪಿತವಾದಂದಿನಿಂದ. ವನ್ಯಮೃಗ ರಕ್ಷಣೋಪಾಯಗಳು, ಅಭಯಾರಣ್ಯಗಳ ನಿರ್ಮಾಣ, ರಾಷ್ಟ್ರೀಯ ಮೃಗಾಲಯಗಳ ಸ್ಥಾಪನೆ, ವನ್ಯಮೃಗಾಭಿವೃದ್ಧಿಯ ಕುರಿತು ವೈಜ್ಞಾನಿಕ ಪರಿಶೀಲನೆ– ಇವು ಭಾರತೀಯ ವನ್ಯಮೃಗ ಮಂಡಳಿಯ ಕಾರ್ಯವ್ಯಾಪ್ತಿಯಲ್ಲಿ ಬರುವ ಪ್ರಮುಖಾಂಶಗಳು. ವನ್ಯಜೀವಿಗಳ ಸಂರಕ್ಷಣೆಗಾಗಿ ವಿವಿಧ ಕಾನೂನುಗಳು ಜಾರಿಯಲ್ಲಿವೆ. ಸ್ಥಾನಿಕವಾಗಿ ರಾಜ್ಯ ಸರಕಾರಗಳು ವನ್ಯ ಜೀವಿಗಳ ಸಂರಕ್ಷಣೆಯನ್ನು ಶಿಕ್ಷಣದಿಂದ ಮತ್ತು ಶಿಕ್ಷೆಯಿಂದ ಪ್ರವೃದ್ಧಿಗೊಳಿಸಬೇಕೆಂದು ಪ್ರತ್ಯೇಕವಾಗಿ ಹೇಳ

ಬೇಕಾಗಿಲ್ಲ; ಅಷ್ಟು ಪ್ರತ್ಯೇಕವಾಗಿಯೇ ಹೇಳಬೇಕು. ಅಳಿದು ಹೋಗುತ್ತಿರುವ ಸುಮಾರು ೩೬ ಬಗೆಯ ವನ್ಯ ಪ್ರಾಣಿಗಳು ಭಾರತದಲ್ಲಿ ಇವೆಯೆಂಬ ಅಂಕೆ-ಅಂಶಗಳ ಕಠೋರ ಸತ್ಯವನ್ನರಿತು ಅವಕ್ಕೆ ಶೀಘ್ರ ರಕ್ಷಣೆ ಅವಶ್ಯವೆಂದು ವನ್ಯಮೃಗ ಮಂಡಳಿ ಸರಕಾರಕ್ಕೆ ತಿಳಿಸಿದೆ. ಸಿಂಹ, ಹುಲಿ, ಘೇಂಡಾಮೃಗ, ನೀಲಬಾತು, ಕರಿಜಿಂಕೆ, ಕಾಡುಕೋಣ, ಬರಸಿಂಗ್ಗ, ಹಿಮಾಲಯದ ಚಿರತೆ, ಹೆಬ್ಬಾವು, ನೀರಕಲ್ಲಿ, ಗಾಜಲ್ಲೆ ಮುಂತಾದವುಗಳ ಹಿಂಡು ಹಾಗೂ ಸಂಖ್ಯೆ ಇಂದು ಬಹು ಮಿತವಾಗಿದೆ. ಅಕ್ರಮ ಬೇಟೆ, ಚರ್ಮದ ಕಳ್ಳಮಾರಾಟ, ಪಿಡುಗು, ಅರಣ್ಯನಾಶ, ವಸತಿ ವಿಸ್ತೀರ್ಣ ಇವೆಲ್ಲವುಗಳಿಂದಾಗಿ ಹಲವು ವನ್ಯಮೃಗಗಳು ಭರದಿಂದ ಕ್ಷಯಿಸುತ್ತಲಿವೆ. ಒಂದಾನೊಂದು ಕಾಲದಲ್ಲಿ— ಕಳೆದ ಶತಮಾನದ ವರೆಗೂ ಏಕಶೃಂಗವುಳ್ಳ ಘೇಂಡಾಮೃಗಗಳು ಈಶಾನ್ಯ ಭಾರತದ ಕಣಿವೆಗಳಲ್ಲಿ ಅಂಡಲೆಯುತ್ತಿದ್ದವು. ಆದರೆ ಈಗ ಅವು ಆಸಾಮದ ಕಾಜಿರಂಗ ಅಭಯಾರಣ್ಯದಲ್ಲಿ ಮಾತ್ರ ಕಂಡುಬರುತ್ತವೆ. ೧೯೫೯ ರಿಂದ ೧೯೬೭ ರ ವರೆಗೆ ಸತ್ತಿರುವವು ಎಂದು ತಿಳಿಯಲಾಗಿರುವ ಒಟ್ಟು ೩೯೦ ಘೇಂಡಾಮೃಗಗಳಲ್ಲಿ ಸುಮಾರು ೬೮ ಘೇಂಡಾಮೃಗಗಳು ಕಳ್ಳ ಬೇಟೆಗಾರರಿಗೆ ತುತ್ತಾಗಿವೆ. ೧೯೬೬ ರ ಗಣತಿಯ ಪ್ರಕಾರ ಕಾಜಿರಂಗ ಅಭಯಾರಣ್ಯದಲ್ಲಿ ೪೦೦ ಘೇಂಡಾಮೃಗಗಳು ಇದ್ದವು— ಅಂದರೆ ಜಗತ್ತಿನಲ್ಲಿ ಒಟ್ಟು ಇರುವ ಈ ಅಪೂರ್ವವೆನಿಸಿದ ಪ್ರಾಣಿಗಳ ಅರ್ಧದಷ್ಟು. ಸಂರಕ್ಷಣಾ ಕ್ರಮಗಳನ್ನು ಹೆಚ್ಚಿಸಿದ್ದರ ಫಲವಾಗಿ ೧೯೭೨ ರಲ್ಲಿ ಇವು

ಗಳ ಸಂಖ್ಯೆ ೫೬೮ ಕ್ಕೆ ಏರಿತ್ತು. ಘೇಂಡಾಮೃಗದ ಕೊಂಬೆ
ಅದಕ್ಕೆ ವೈರಿಯಾಗಿದೆ. ಕೊಂಬು ಕಳ್ಳಪೇಟೆಯಲ್ಲಿ ಒಂದ
ಪೌಂಡಿಗೆ ರೂಪಾಯಿ ೩೦೦೦೦ ಗಳಂತೆ ಮಾರಾಟವಾಗುತ್ತದೆ
ಅಧಿಕೃತ ದರ ರೂ. ೧೨೦೦ ದಷ್ಟಿದೆ. ಒಂದು ಕೊಂಬ
ಸರಾಸರಿ ೧½ ಕೆ. ಜಿ. ಯಿಂದ ೨ ಕೆ. ಜಿ. ಗಳ ವರೆಗೂ ತೂಗ
ತ್ತದೆ. ಕಾಮೋದ್ದೀಪಕ ಗುಣವಿರುವದೆಂದು ನಂಬಲಾಗು
ಘೇಂಡಾಮೃಗದ ಕೋಡಿಗೆ ಆಗ್ನೇಯ ಏಷ್ಯ ಮತ್ತು ಆಫ್ರಿಕದ
ದೇಶಗಳಲ್ಲಿ ಭಾರೀ ಬೇಡಿಕೆ. ಕಲ್ಕತ್ತಾದಲ್ಲಿ ಇದರ ಅಕ್ರಮ
ನಿರ್ಯಾತ ಪೇಟೆಯೊಂದು ಬೆಳೆದಿದೆಯೆಂದು ಹೇಳಲಾಗುತ್ತಿದೆ.

ಗಿರ್ ಅರಣ್ಯದಲ್ಲಿ ಇಂದು ಕೇವಲ ೨೬೫ ಸಿಂಹಗಳಿವೆ
ಕರ್ನಾಟಕದ ಮಲೆನಾಡುಗಳಲ್ಲಿ ಹಿಂದೊಮ್ಮೆ ಹೇರಳ ಸಂಖ್ಯೆ
ಯಲ್ಲಿದ್ದ ಕಾಡುಕೋಣಗಳು ಇಂದು ಬಿಳಿಗಿರಿ ರಂಗನ ಬೆಟ್ಟ
ಶ್ರೇಣಿ, ಬಂಡಿಪುರ ಅಭಯಾರಣ್ಯ, ಲಕ್ಕವಳ್ಳಿ, ನಾಗರಹೊಳೆ
ದಾಂಡೇಲಿ ಮುಂತಾದ ಪ್ರದೇಶಗಳಲ್ಲಿ ಮಾತ್ರ ಇವೆ. ಕಸ್ತೂ
ಗಾಗಿ ಕಸ್ತೂರಿಮೃಗವನ್ನು ಬಹಳ ಹಿಂದಿನ ಕಾಲದಿಂದಲೂ
ಬೇಟೆಯಾಡುತ್ತ ಬಂದಿರುವದರಿಂದ ಕಸ್ತೂರಿಮೃಗಗಳ ಸಂಖ
ಕ್ಷೀಣವಾಗಿದೆ. ಮೈಸೂರು, ಕೇರಳ, ಆಂಧ್ರ, ತಮಿಳುನಾಡ
ಮಧ್ಯಪ್ರದೇಶ, ಮಹಾರಾಷ್ಟ್ರ, ಓರಿಸ್ಸಾ ಹಾಗೂ ಹಿಮಾಲಯ
ತಪ್ಪಲಿನ ಅಸ್ಸಾಮಿನ ಕುಮಾನ್ ಕಾಡುಗಳಲ್ಲಿ ವಿಜೃಂಭಿಸಿ
ರಾಷ್ಟ್ರದ ವ್ಯಾಘ್ರ ಸಂತತಿಯಲ್ಲಿ ಹತ್ತೊಂಬತ್ತು ಪಾಲು ಅಳಿ
ದೋಗಿ ಇನ್ನೊಂದು ಪಾಲು ಮಾತ್ರ ಮಿಕ್ಕಿದೆ ಎಂದು ವಿ

ದಲ್ಲಿ ಪ್ರಥಮಬಾರಿಗೆ ಭಾರತದಲ್ಲಿ ಕೈಕೊಂಡ ವ್ಯಾಘ್ರಗಣತಿ ವಿಶದಪಡಿಸಿದೆ. ಈ ಶತಮಾನದ ಆದಿಯಲ್ಲಿ ಭಾರತದ ಭವ್ಯವಾದ ಅರಣ್ಯಗಳಲ್ಲಿ ಸುಮಾರು ೪೦ ಸಹಸ್ರ ಹುಲಿಗಳು ಮೆರೆದಾಡುತ್ತಿದ್ದವು. ಆದರೆ ಇಂದು ಇಡೀ ಭಾರತದಾದ್ಯಂತ ಉಳಿದಿರುವ ಹುಲಿಗಳ ಸಂಖ್ಯೆ ಕೇವಲ ೧೮೨೭. ಹುಲಿಗಳು ಮನುಷ್ಯನಿಗೆ ಅಪಾಯಕಾರಿ ಎನ್ನುವ ಕಾರಣದಿಂದ ಹಿಂದಿನಿಂದಲೂ ಅವುಗಳನ್ನು ಬೇಟೆಯಾಡಿ ಕೊಲ್ಲುವ ಪರಿಪಾಠವೊಂದಿತ್ತು. ಅದರ ಜೊತೆಗೇಯೆ ವಿನೋದಕ್ಕಾಗಿ ಬೇಟೆಯಾಡುವ ಒಂದು ಚಪಲವೂ ಬೆರೆತುಕೊಂಡಿತು. ಹುಲಿಗಳಲ್ಲಿ ಮಿತಸಂತಾನ ಯೋಜನೆಯನ್ನು ಯಾರೂ ಜಾರಿಮಾಡಿಲ್ಲವಾದರೂ ಹುಟ್ಟುವ ಹುಲಿಗಳಿಗಿಂತ ಸಾಯುವ ಹುಲಿಗಳ ಸಂಖ್ಯೆ ಹೆಚ್ಚಾಗತೊಡಗಿದ್ದರಿಂದ "ಶರಭ"ದಂತೆ ಹುಲಿಯೂ ಐತಿಹಾಸಿಕ ಪ್ರಾಣಿಯಾಗಿ ಚರಿತ್ರೆಯ ಪುಸ್ತಿಕೆಗಳಲ್ಲಿ ಮಾತ್ರ ಉಳಿಯುವ ಪ್ರಸಂಗ ಈಗ ಪ್ರಾಪ್ತವಾಗುತ್ತಿದೆ. ಮೂಲತಃ ಹುಲಿಗಳು ಮನುಷ್ಯನಿಗೆ ಅಪಾಯಕಾರಿ ಎನ್ನುವ ಮಾತೇ ತಪ್ಪು. ಇತಿಹಾಸಕಾಲದಿಂದ ಲೆಕ್ಕ ಹಾಕಿದರೂ ಮನುಷ್ಯರು ಹುಲಿಗಳನ್ನು ಕೊಂದಷ್ಟು ಹುಲಿಗಳು ಮನುಷ್ಯರನ್ನು ಕೊಲ್ಲಲಿಲ್ಲ. ಇದು ಐತಿಹಾಸಿಕ ಸತ್ಯ; ಇವತ್ತಿಗೂ ಸತ್ಯ. ಅಂತೂ ತನ್ನ ತಪ್ಪಿನ ಅರಿವಿನಿಂದಲೋ ಅಥವಾ ಮುಂದೆ ಕೊಲ್ಲುವದಕ್ಕಾದರೂ ಹುಲಿಗಳು ಬೇಕಲ್ಲ ಎನ್ನುವ ಸ್ವಾರ್ಥಕ್ಕೋ ಯಾವುದಕ್ಕೋ ಆದರೂ ಸದ್ಯ ಹುಲಿಗಳು ನಿರ್ನಾಮವಾಗುವ ಪರಿಸ್ಥಿತಿಯನ್ನು ಹೋಗಲಾಡಿಸಿ ಅವುಗಳನ್ನು ಬೆಳೆಯಗೊಡ

ಬೇಕು ಎಂದು ಈಗ ಯೋಚಿಸಲಾಗುತ್ತಿದೆ. ಸಿಂಹ–ಹುಲಿ ಮುಂತಾದ ರಾಷ್ಟ್ರೀಯ ಮೃಗಗಳ ಬೇಟೆಯ ಮೇಲೆ ನಿಷೇಧಾಜ್ಞೆಯನ್ನು ಹೊರಡಿಸಲಾಗಿದೆ. ವ್ಯಾಘ್ರ ಸಂತತಿಯನ್ನು ಉಳಿಸಿ ಬೆಳೆಸಲು ಸುಮಾರು ೬ ಕೋಟಿ ರೂಪಾಯಿ ವೆಚ್ಚದ ಆರು ವರುಷದ ಯೋಜನೆಯನ್ನು ಭಾರತ ಸರಕಾರ ಸಧ್ಯ ತಯಾರಿಸಿದೆ. ಯೋಜನೆ ಕಾಡಿನ ತನಕ ಹರಿದು ಬಂದರೆ ಹುಲಿಗಳ ಅದೃಷ್ಟ ಖುಲಾಯಿಸೀತು—ಅವುಗಳ ಜಾತಕದಲ್ಲಿ ಶುಭಗ್ರಹಗಳ ದೃಷ್ಟಿ ಬಿದ್ದೀತು.

ಮೃಗಯಾಸಾಹಿತಿ ಜಿಮ್ ಕಾರ್ಬೆಟ್ ಹುಲಿಯನ್ನು ವ್ಯರ್ಥವಾಗಿ ವಿನೋದಕ್ಕೆಂದು ಕೊಲ್ಲುವ ಮನುಷ್ಯರ ಮೂರ್ಖತನವನ್ನು ಕಂಡು ಮರುಗಿದ್ದಾನೆ. ಹುಲಿಯಂಥ ಭವ್ಯಪ್ರಾಣಿ ಸೃಷ್ಟಿಯಲ್ಲಿ ಇನ್ನೊಂದಿಲ್ಲ ಎಂದು ಅವನು ಹೇಳುತ್ತಾನೆ. "ಅದರ ಆಕರ್ಷಕವಾದ ಮಾಂಸಲವಾದ ಮೈ, ಧೀರವಾದ ನಡೆ, ಗಂಭೀರವಾದ ರೋಮಾಂಚಕರವಾದ ನೋಟ ಇವು ಅಸ್ವಾಭಾವಿಕವಾದವುಗಳು. ಅದು ಎಂದೂ ಹಸಿವಾದಾಗ ಮತ್ತು ತನ್ನನ್ನು ಆಪತ್ತಿನಿಂದ ರಕ್ಷಿಸಿಕೊಳ್ಳುವದಕ್ಕಾಗಿ ಅಲ್ಲದೆ ಬೇರೆ ಸಂದರ್ಭದಲ್ಲಿ ಆಕ್ರಮಣ ಮಾಡುವದಿಲ್ಲ. ಅದರಷ್ಟು ನೀತಿ ಪ್ರಜ್ಞೆ, ಜಾಗ್ರತೆ, ಮನುಷ್ಯನಲ್ಲಿರುತ್ತಿದ್ದರೆ ಜಗತ್ತು ಇಂದು ಹೀಗಿರುತ್ತಿರಲಿಲ್ಲ. ಜನ ಹೀಗೆ ಹೊಡೆದಾಡಿಕೊಂಡು ಬದುಕುತ್ತಲೂ ಇರುತ್ತಿರಲಿಲ್ಲ" ಎಂದು ಆತ ಉದ್ಗರಿಸಿದ್ದಾನೆ. ಇವು ಯಾವವೂ ಅತಿ ಭಾವುಕತೆಯ ಉದ್ಗಾರಗಳಲ್ಲ. ತನ್ನ

ಬಾಳಿನುದ್ದಕ್ಕೂ ಹುಲಿಗಳ ಜೊತೆಗೆ ನಿಕಟ ಸಂಪರ್ಕವನ್ನಿರಿಸಿಕೊಂಡಿದ್ದ ಜಿಮ್ ಬರೆದ ಅನುಭವದ ನುಡಿಗಳು. ನಮ್ಮಲ್ಲಿ ಪುರುಷರಲ್ಲಿ ನಾಯಕತ್ವದ ಗುಣವುಳ್ಳವರನ್ನು, ಸಮಾಜದಲ್ಲಿ ಎದ್ದು ಕಾಣುವಂಥ ವಿಶಿಷ್ಟ ವ್ಯಕ್ತಿತ್ವವುಳ್ಳವರನ್ನು, ಜನಾಂಗದ ಶ್ರೇಷ್ಠ ಪುರುಷರನ್ನು "ಪುರುಷ ವ್ಯಾಘ್ರ" ಎಂದು ಕರೆಯುವ ವಾಡಿಕೆ ಇರುವದನ್ನು ಇಲ್ಲಿ ಟಿಪ್ಪಣಿಸಿಕೊಳ್ಳಬಹುದು.

ಭರದಿಂದ ಕ್ಷಯಿಸುತ್ತಿರುವ ವನ್ಯಮೃಗಗಳನ್ನು ರಕ್ಷಿಸಲು ಸರಕಾರ ಇನ್ನೂ ಹೆಚ್ಚು ಕ್ರಿಯಾಶಾಲಿಯಾಗಬೇಕಾಗಿದೆ. ಅರಣ್ಯಖಾತೆಯು ಅಕ್ರಮ ಬೇಟೆಗಾರರಿಂದ ತುಂಬಲಾಗದ ನಷ್ಟವನ್ನು ಅನುಭವಿಸುತ್ತಲಿದೆ. ಇಂತಹ "ಮಾನವಮೃಗ"ಗಳು ತಮ್ಮ ಜೇಬುಗಳನ್ನು ತುಂಬಿಕೊಳ್ಳುವದಕ್ಕಾಗಿ ಅತಿ ಮೌಲ್ಯದ ಅರಣ್ಯಮೃಗಗಳನ್ನು ಆಹುತಿ ತೆಗೆದುಕೊಳ್ಳುತ್ತಲಿದ್ದಾರೆ. ರಾಷ್ಟ್ರದ ಅಮೂಲ್ಯ ಆಸ್ತಿಯು ನಿರ್ನಾಮ ಪಥದಲ್ಲಿರುವದು ರಾಷ್ಟ್ರದ ಪ್ರವಾಸೋದ್ಯಮ ಖಾತೆಗೂ ಒಂದು ಭಾರೀ ನಷ್ಟ. ದಿನಗಳೆದಂತೆ ಹುಲಿ, ಚಿರತೆಗಳ ಸಂತತಿಯು ಕ್ಷೀಣಿಸುತ್ತಿದ್ದರೂ ವ್ಯಾಪಾರಿ ಮಳಿಗೆಗಳಲ್ಲಿ ಮಾತ್ರ ಇವುಗಳ ಸುಂದರ ಚರ್ಮಗಳ ಅಪಾರ ದಾಸ್ತಾನು ಕಂಗೊಳಿಸುತ್ತಲೇ ಇದೆ. ಶಿಕಾರಿ, ಅಕ್ರಮ ಚರ್ಮದ ಮಾರಾಟ, ಅರಣ್ಯಗಳ ಜಾನುವಾರು ಮೇಯಿಸುವದು, ಪಾಷಾಣಪ್ರಯೋಗಿಸಿ ವನ್ಯ ಮೃಗಗಳ ಕೊಲೆ, ಸೌದೆಗಾಗಿ ವನ್ಯ ಸಂಪತ್ತನ್ನು ಕಡಿಯುವದು ಹಾಗೂ ಸುಡುವದು ಇತ್ಯಾದಿ ಕ್ರಿಯೆಗಳನ್ನೆಲ್ಲ ಬಹಿಷ್ಕರಿ

ಸುವದೇ ಅಲ್ಲದೆ ಇದಕ್ಕೆ ನೇಮಿತರಾದ ವಿಶೇಷ ಸಿಬ್ಬಂದಿ ತಪ್ಪಿತಸ್ಥರನ್ನು ಹಿಡಿದುಕೊಡುವದು ಇತ್ಯಾದಿ ಪ್ರೋಗದಸ್ತ್ಯದ ವ್ಯವಸ್ಥಾಕ್ರಮಗಳು ವನ್ಯಮೃಗಾಭಿವೃದ್ಧಿಗೆ ಪೂರಕ ಹಾಗೂ ಪೋಷಕವಾದ ಅಂಶಗಳು. ಇದರ ಬಗ್ಗೆ ನಿಷ್ಠುರ ಶಾಸನವನ್ನು ಜಾರಿಗೆ ತಂದು ಸರಕಾರ ಶಿಕ್ಷೆಯನ್ನು ಕಠಿಣಗೊಳಿಸಬೇಕು. ವನ್ಯಮೃಗ ರಕ್ಷಣೆಗೆಂದು ಶಾಶ್ವತ ನಿಧಿಯೊಂದು ಏರ್ಪಟ್ಟು ಅದರ ಸಂಪನ್ಮೂಲಗಳನ್ನು ವನ್ಯಮೃಗಾಭಿವೃದ್ಧಿಯ ಸಲುವಾಗಿಯೇ ಮೀಸಲಾಗಿಡುವಂತಾಗಬೇಕು. ಅಭಯಾರಣ್ಯಗಳ ಸಂಖ್ಯೆ ಮತ್ತು ವಿಸ್ತಾರ ಅಧಿಕಗೊಳ್ಳಬೇಕು. ಮೃಗಗಳಿಗೆ ತಗಲಬಹುದಾದ ಪಿಡುಗುಗಳನ್ನು ದೂರೆಸೆತದ ಚುಚ್ಚುಮದ್ದಿನಿಂದ ನಿವಾರಿಸಲು ಸಾಧ್ಯವಿದೆ ಎಂಬುದು ಪ್ರಯೋಗದಿಂದ ತಿಳಿದುಬಂದಿದೆ. ತಜ್ಞ ತಾಂತ್ರಿಕ ಕೌಶಲ್ಯ ದೊರಕಿಸಿ ಇದರ ವಿಸ್ತೃತ ಅನುಷ್ಠಾನದೆಡೆಗೆ ಅರಣ್ಯಖಾತೆ ಮುಂದುವರಿಯಬೇಕು. ಚಿತ್ರಪಟ, ಸಂಕೀರ್ಣ ಪತ್ರಿಕೆ, ವೇದಿಕೆ, ಆಕಾಶವಾಣಿ ಇವೇ ಮುಂತಾದ ಜನತಾ ಮಾಧ್ಯಮಗಳ ಮೂಲಕ ವನ್ಯಮೃಗಗಳ ಸೊಬಗು ಹಾಗೂ ಮಹತ್ವವನ್ನು ಜನರಲ್ಲಿ ಮೂಡಿಸಿ ವನ್ಯಮೃಗಗಳ ಕುರಿತಾಗಿರುವ ಅವರ ಭಾವನೆಯನ್ನು ಬದಲಿಸುವದು ಅತ್ಯಂತ ಜರೂರ ಕೆಲಸ. ಎರಡು ಸಾವಿರ ವರ್ಷಗಳ ಹಿಂದೆ ವನ್ಯಮೃಗಗಳ ರಕ್ಷಣೆಯ ಉದ್ದೇಶದಿಂದ ಆ ಬಗ್ಗೆ ಪ್ರಥಮ ನಿಬಂಧನೆಗಳನ್ನು ಮಾಡಿದ ಅಶೋಕನ ಈ ನಾಡಿನಲ್ಲಿ ವನ್ಯಮೃಗಗಳನ್ನು ಹೆಚ್ಚು ಎಚ್ಚರಿಕೆ ಮತ್ತು ಶ್ರದ್ಧೆಯಿಂದ ನೋಡಿಕೊಳ್ಳಬೇಕು. ಹುಲಿ, ಚಿರತೆ

ಸಿಂಹಗಳು ವಿಷ್ಣುಶರ್ಮನ "ಪಂಚತಂತ್ರ" ಕಥೆಯಲ್ಲಿ ಮಾತ್ರ ಉಳಿಯುವಂತಾಗಬಾರದು. ನಮ್ಮ ಅರಣ್ಯಗಳಲ್ಲಿ ಶತ-ಶತಮಾನಗಳಿಂದ ರಾರಾಜಿಸುತ್ತಿದ್ದ ಭವ್ಯ ವನಜೀವಿಯ ಸಂತತಿ ಅಳಿದುಹೋಗಿ ನಮ್ಮ ಮರಿಮಕ್ಕಳಿಗೆ ಕೃತಿಕೆ ಹಾಗೂ ಚಿತ್ರಗಳ ಮುಖೇನ ಮಾತ್ರ ಇದರ ಪರಿಚಯ ಮಾಡಿಕೊಡಬೇಕಾದ ಪರಿಸ್ಥಿತಿ ಬರಬಾರದು.

## ಮೃಗಾಲಯಗಳು

ಒಂದೊಂದು ದೇಶದ ಕಾಡಿನಲ್ಲಿ ಒಂದೊಂದು ಬಗೆಯ ಪ್ರಾಣಿ. ಭಾರತದ ಗಿರ್ ವನ್ಯಪ್ರದೇಶದಲ್ಲಿ ಸಿಂಹಗಳೂ, ಆಫ್ರಿಕದ ಇಥಿಯೋಪಿಯದಲ್ಲಿ ಜಿಬ್ರಗಳೂ, ಭಾರತ, ಆಫ್ರಿಕಾ ಕಾಡುಗಳಲ್ಲಿ ಆನೆಗಳೂ, ಆಸ್ಟ್ರೇಲಿಯದಲ್ಲಿ ಕಾಂಗರುಗಳೂ, ಧ್ರುವಪ್ರದೇಶದಲ್ಲಿ ಬಿಳಿಕರಡಿಗಳೂ ಪ್ರಸಿದ್ಧ. ಎಲ್ಲರೂ ಈ ಪ್ರಾಣಿಗಳಿರುವ ದೇಶಗಳಿಗೆ ಹೋಗಿ ಇವನ್ನು ನೋಡುವದು ಅಶಕ್ಯ. ಮೃಗಾಲಯಗಳು ಮಾನವನ ಕುತೂಹಲವನ್ನು ತಣಿಸುತ್ತವೆ. ಜನ ನೋಡುವದಕ್ಕಾಗಿ, ಪ್ರಾಣಿಶಾಸ್ತ್ರಜ್ಞರು ಮತ್ತು ಇತರರು ಅಭ್ಯಸಿಸುವದಕ್ಕಾಗಿ ಬದುಕಿರುವ ಪ್ರಾಣಿಗಳನ್ನು ಸಾಮಾನ್ಯವಾಗಿ ಕಾಡುಗಳಲ್ಲಿ ವಾಸಿಸುವ ಪ್ರಾಣಿಗಳನ್ನು ಹಿಡಿದು ತಂದಿಟ್ಟಿರುವ ದೊಡ್ಡ ಆವರಣವಿರುವ ಸ್ಥಳ ಮೃಗಾಲಯ.

ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರಪಂಚದ ಅನೇಕ ಭಾಗಗಳಲ್ಲಿ ಮೃಗಾಲಯಗಳು ಆರಂಭವಾದವು. ೧೮೨೮ ರಲ್ಲಿ

ಸ್ಥಾಪಿಸಲ್ಪಟ್ಟ ನ್ಯೂಯಾರ್ಕ ಮೃಗಾಲಯವು ಪ್ರಪಂಚದಲ್ಲಿರುವ ಅತ್ಯಂತ ದೊಡ್ಡ ಮೃಗಾಲಯಗಳಲ್ಲೊಂದು. ಇದರ ವಿಸ್ತೀರ್ಣ ಸುಮಾರು ೧೦,೧೨೦ ಚದರು ಮೀಟರುಗಳು. ಇಲ್ಲಿ ೨೫೦೦ ಪ್ರಾಣಿಗಳಿವೆ. ವಾಶಿಂಗ್ಟನ್ ದಲ್ಲಿರುವ ಮೃಗಾಲಯದಲ್ಲಿ ೬,೦೦೦ ಪ್ರಾಣಿಗಳಿವೆ. ಮಾಸ್ಕೋ ಮೃಗಾಲಯದಲ್ಲಿ ೨೫೦೦ ಪ್ರಾಣಿ ಪಕ್ಷಿಗಳಿವೆ. ಕಲ್ಕತ್ತಾದ ಆಲಿಪುರದಲ್ಲಿ ಬಂಗಾಳ ಸರಕಾರ ೧೮೭೫ರಲ್ಲಿ ಸ್ಥಾಪಿಸಿದ ಮೃಗಾಲಯ ಭಾರತದಲ್ಲಿರುವ ದೊಡ್ಡ ಮೃಗಾಲಯಗಳಲ್ಲೊಂದು. ಮೈಸೂರಿನ ಮೃಗಾಲಯ, ಹೈದರಾಬಾದಿನ ಹೊರವಲಯದಲ್ಲಿರುವ ನೆಹರು ಪ್ರಾಣಿವನ ಹಾಗೂ ಮುಂಬಯಿಯ ವಿಕ್ಟೋರಿಯಾ ಪ್ರಾಣಿ ಸಂಗ್ರಹಾಲಯ ಪ್ರಖ್ಯಾತವಾಗಿವೆ.

ಕಾಡುಗಳಲ್ಲಿ ಸ್ವೇಚ್ಛೆಯಾಗಿ ಓಡಾಡಿಕೊಂಡಿರುವ ಪ್ರಾಣಿಗಳು ಮೃಗಾಲಯದ ಜೋನುಗಳಲ್ಲಿ, ಪಂಜರಗಳಲ್ಲಿ, ಕೃತಕ ವಾತಾವರಣದಲ್ಲಿ ಸಂತೋಷವಾಗಿರಬಲ್ಲವೇ ? ಅಪಾಯಕಾರಿ ಪ್ರಾಣಿಗಳನ್ನು ಬಿಟ್ಟರೆ ಉಳಿದ ಪ್ರಾಣಿಗಳಿಗೆ ಅದಷ್ಟು ಸ್ವಾತಂತ್ರ್ಯ ಕೊಡಲಾಗುತ್ತಿದೆ. ಚಿಕ್ಕ ವಯಸ್ಸಿನಲ್ಲಿಯೇ ಮೃಗಾಲಯವನ್ನು ಸೇರಿದ ಪ್ರಾಣಿಗಳು ಹೊಸ ಜೀವನಕ್ಕೆ, ಬಂಧನಕ್ಕೆ ಬೇಗನೆ ಒಗ್ಗಿಕೊಳ್ಳುತ್ತವೆ. ಕೆಲವೊಂದು ಪ್ರಾಣಿಗಳು ಬಂಧನದಲ್ಲಿರಲು ಬಯಸದೆ ಸಾವನ್ನಪ್ಪಿದ ಉದಾಹರಣೆಗಳಿವೆ. ಮೈಸೂರು ಮೃಗಾಲಯಕ್ಕೆ ಬಂದ ನಾಗರ ಹಾವೊಂದು ದಿನಗಟ್ಟಲೆ ಉಪವಾಸ ಮಾಡಿ ಮರಣ ಹೊಂದಿತು.

ಮೃಗಾಲಯವು ಪ್ರಾಣಿಗಳನ್ನು ಬಂಧಿಸಿಡುವ ಜಾಗ ಮಾತ್ರವೆಂಬ ಕಲ್ಪನೆ ಈಗೀಗ ಕಡಿಮೆಯಾಗತೊಡಗಿದೆ. ಜೀವ ಜಗತ್ತಿನ ವಿಚಿತ್ರ ಚಟುವಟಿಕೆಗಳನ್ನು ತಿಳಿಯಲು ಅಭಿರುಚಿಯನ್ನು ಕುದುರಿಸಲು ಮೃಗಾಲಯಗಳು ಅತಿ ಅಗತ್ಯ ಎಂಬ ಭಾವನೆ ಬರುತ್ತಲಿದೆ. ವನ್ಯಮೃಗಗಳು ಹಲವಾರು ಕಾರಣಗಳಿಂದ ನಶಿಸಿಹೋಗುವದನ್ನು ತಡೆಯುವದರಲ್ಲಿ ಮೃಗಾಲಯಗಳ ಜವಾಬ್ದಾರಿ ಹೆಚ್ಚಿದೆ. ೧೯೬೭ರ ಸಮಯಕ್ಕೆ ತಿಳಿದಂತೆ ಅಪಾಯಕ್ಕೊಳಗಾದ ೫೧ ಸಸ್ತನಿ ಜಾತಿಗಳನ್ನೂ, ೨೧ ಹಕ್ಕಿ–ದ್ವಿಚರಗಳನ್ನೂ ಮೃಗಾಲಯಗಳಲ್ಲಿ ಸಾಕಿ ರಕ್ಷಿಸಲಾಗಿದೆ. ಒರಾಂಗ್ ಉಟಾಂಗ್, ಗಾಲಪಾಗಸ್ ದೈತ್ಯ ಆಮೆ, ಬಿಳಿ ಹುಲಿಗಳಂಥ ವಿರಳ ಪ್ರಾಣಿಗಳು ಮೃಗಾಲಯದಲ್ಲಿ ಸಂತಾನಾಭಿವೃದ್ಧಿ ಮಾಡಿದ ದೃಷ್ಟಾಂತಗಳಿವೆ. ಮೃಗಾಲಯಗಳೂ, ಮೀನ ತೊಟ್ಟಿಗಳೂ ವೈಜ್ಞಾನಿಕ ಸಂಶೋಧನೆಯಲ್ಲಿ ಪ್ರಮುಖ ಪಾತ್ರ ವಹಿಸಿವೆ.

ಮೃಗಾಲಯಗಳಲ್ಲಿ ಮೃಗಾಲಯ ಪರಿಣಿತರೂ, ಪಶುವೈದ್ಯ ಚಿಕಿತ್ಸಕರೂ ಪ್ರಾಣಿಗಳನ್ನು ಪರೀಕ್ಷಿಸಿ ಅವುಗಳ "ಅಹವಾಲಿದ್ದರೆ" ಪರಿಶೀಲಿಸುವರು. ಮೃಗಾಲಯದ ಕೆಲಸಗಾರರು ಅಲ್ಲಿರುವ ಪ್ರಾಣಿ–ಪಕ್ಷಿಗಳ ಸ್ವಭಾವ, ಅಭ್ಯಾಸಗಳನ್ನು ಚೆನ್ನಾಗಿ ಅರಿತಿರುವರು. ಒಂದಕ್ಕೆ ಅಜೀರ್ಣ ಮತ್ತೊಂದಕ್ಕೆ ಗಂಟಲು ಹುಣ್ಣು ಇನ್ನು. ಕೂಡಲೇ ಮೃಗಾಲಯದ ಸಿಬ್ಬಂದಿ ವರ್ಗದವರು ಗಮನಿಸುವರು. ಅಗತ್ಯ ಪ್ರಮಾಣದ ಆಹಾರ

ನೀಡುವರು ಪ್ರಾಣಿ-ಪಕ್ಷಿಗಳ ಉಪವಾಸ ಹಾಗೂ ಮಿತ ಆಹಾರ
ನೀಡಿಕೆಯನ್ನು ಚಾಚೂ ತಪ್ಪದೆ ಗಮನಿಸಲಾಗುವದು. ಮೃಗಾ
ಲಯದ ಪ್ರಾಣಿಗಳಿಗೆ ಆಹಾರದಲ್ಲಿ ವ್ಯತ್ಯಾಸವಾದರೆ ಕಷ್ಟ
ವಾಗುವದು. ಎಚ್ಚರಿಕೆ "ಅಗತ್ಯ'. ಕೆಲವು ವೇಳೆ ಜಗೇಗಂಟ
ಪ್ರಾಣಿ-ಪಕ್ಷಿಗಳನ್ನು ಪ್ರತ್ಯೇಕಿಸಬೇಕಾಗುವದು. 'ಶೋಧನೆ
ಗಾಗಿ' ಹೊರಹೋಗುವದನ್ನು ವಾಪಸು ಕರೆತರಬೇಕಾಗುವದು.
ರೋಗಗಳನ್ನು ನಿರೋಧಿಸಲು ಆಗಾಗ ಪ್ರಾಣಿ-ಪಕ್ಷಿಗಳನ್ನು
ಪರೀಕ್ಷಿಸಿ ರೋಗನಿರೋಧಕ ಕ್ರಮ ಕೈಕೊಳ್ಳಲಾಗುವದು.
ಮರಿಗಳ ಬಗೆಗೆ ಹೆಚ್ಚು ಮುತವರ್ಜಿ ವಹಿಸಲಾಗುವದು. ಅವು
ಆರೋಗ್ಯದಿಂದ ಬೆಳೆಯಲು ಪುಷ್ಟಿಯುತ ಆಹಾರ ನೀಡುವ
ದಲ್ಲದೆ ಆರೋಗ್ಯಕರ ವಾತಾವರಣವನ್ನು ನಿರ್ಮಿಸಲಾಗುವದು.
ಪ್ರಾಣಿಗಳಿಗೆ ದಯೆ ತೋರಿಸುವದೂ ಅವುಗಳನ್ನು ಚೆನ್ನಾಗಿ
ಪಾಲಿಸುವದೂ ಅಗತ್ಯ.

## ೫. ಮುಗಿಸುವ ಮೊದಲು

'ಮಾರಿಯ ಕಣ್ಣು ಹೋತದ ಮೇಲೆ'

**ಮುಖ್ಯಾಂಶಗಳು :**

೧) ಮಾನವ ತನ್ನ ತಾತ್ಕಾಲಿಕ ಸೌಕರ್ಯ ಹಾಗೂ ಲಾಭಕ್ಕಾಗಿ ಅರಣ್ಯಗಳಿಗೆ ಉಂಟು ಮಾಡುತ್ತಿರುವ ಹಾನಿ ಅಪಾರವಾಗಿದೆ. ವನ್ಯಾಪರಾಧವನ್ನು ತಡೆಯಲು ಶಾಸನಕ್ಕಿಲ್ಲದ ಶಕ್ತಿ ಸಂಸ್ಕಾರಕ್ಕಿದೆ. ವರುಷ ವರುಷವೂ ಮರಗಳನ್ನು ಕಡಿದಹಾಗೆ ಅರಣ್ಯ ಬರಿದಾಗುತ್ತದೆ. ಅರಣ್ಯ ಬರಿದಾದರೆ ದೇಶವೇ ಮರುಭೂಮಿಯಾದೀತು. ಹತ್ತಾರು ವರುಷ ಸೊಂಪಾಗಿ ಬೆಳೆದ ಮರಗಳು ಇಂದು ಜನರ ಬಳಕೆಗೆ ಬಂದಂತೆ ಮುಂದಿನ ಜನಾಂಗಕ್ಕೂ ದೊರೆಯಬೇಕೆಂಬ ಮಾನವೀಯ ಪ್ರಜ್ಞೆ ನಮ್ಮಲ್ಲಿ ಮೂಡಿಬರಬೇಕು. ಕೊಡಲಿಯ ಪೆಟ್ಟು ಕಾಲಕ್ಕೆ ಕ್ಷಯವಾಗಬಾರದು. ಕಡಿದ ಭಾಗದಲ್ಲಿ ಹೊಸ ಕುಡಿ ನೆಡಬೇಕೆಂಬ ಪೂರ್ಣಪ್ರಜ್ಞೆಯಿರಬೇಕು. ಜರ್ಮನಿಯ ಹೆಸರಾಂತ ಬ್ಲ್ಯಾಕ್ ಫಾರೆಸ್ಟದಲ್ಲಿ ಒಂದು ಮರವನ್ನು ಕಡಿದರೆ ತಪ್ಪದೆ ಇನ್ನೊಂದು ಸಸಿಯನ್ನು ನೆಡಬೇಕೆಂಬ ಪರಂಪರಾಗತವಾಗಿ ಬಂದ ನಿಯಮವನ್ನು ಇಲ್ಲಿ ನೆನೆಯಬಹುದು. ವನದೇವಿ ಬೆತ್ತಲಾಗುವಷ್ಟು ಕೃಶಾಂಗಿಯಾಗಬಾರದು. ಪ್ರಕೃತಿಗೆ

ತೊಟ್ಟ ವನರಾಜ್ಞಿಯಾಗಬೇಕು. ಅಡವಿಗಳು ರಾಜ್ಯ ಸ
ಕಾರಗಳಿಗೆ ಸಂಬಂಧಿಸಿದವು. ಕೆಲವು ರಾಜ್ಯ ಸರಕಾರಗಳ
ಹೆಚ್ಚು ಆದಾಯ ಗಳಿಸಲು ಅಡವಿಗಳನ್ನು ಕಡಿಯಲು ಗುತ್ತಿ
ಕೊಟ್ಟಿವೆ. ಗುತ್ತಿಗೆದಾರರಿಗೆ ಕೈಗಾರಿಕೆಗೆ ಪೋಷಕವಾಗು
ಬೆಳೆಯದ ಮರಗಳನ್ನು ಕಡಿಯಬಾರದು ಎಂದು ಚಿಂತಿಸು
ಅವಕಾಶವೆಲ್ಲಿ ? ಹೀಗಾಗಿ ಅಮೂಲ್ಯ ಅರಣ್ಯಸಂಪತ್ತಿ
ಅಪವ್ಯಯವಾಗುತ್ತಲಿದೆ. ಈ ದಿಶೆಯಲ್ಲಿ ಗಟ್ಟಿಯಾದ
ಏರ್ಪಾಡು ಅಗತ್ಯ. ತೊಟ್ಟಿಲಿನೊಂದಿಗೆ ಮಗುವನ್ನೂ
ಮಾರುವದು ಜಾಣತನದ ಲಕ್ಷಣವಲ್ಲ.

೨) ಅರಣ್ಯ ರಾಷ್ಟ್ರದ ಸಜೀವ ಸಂಪತ್ತು. ಅದರ
ಹಿಗ್ಗು–ಕುಗ್ಗುಗಳೊಡನೆ ದೇಶದ ವೃದ್ಧಿ ಕ್ಷಯಗಳು ನಿಕಟವಾಗಿ
ಹೊಂದಿಕೊಂಡಿವೆ. ಅವು ನಾಡಿಗೂ ಕಾಡಿಗೂ ಅಂಟಿದ
ನಂಟು. ಅರಣ್ಯೋತ್ಪತ್ತಿಗಳ ಮೇಲಷ್ಟೇ ಲಕ್ಷ್ಯ ಕೊಡದೆ ಅ
ಸಂಪತ್ತನ್ನು ಬೆಳೆಸುವ ಬಗೆ ಹಾಗೂ ಆ ಕುರಿತಾದ ಶಿಕ್ಷಣ–
ಸಂಶೋಧನೆಗಳೆಡೆಗೂ ಸರಕಾರ ಇನ್ನೂ ಹೆಚ್ಚಿನ ಲಕ್ಷ್ಯ
ಕೊಡುವದು ಅವಶ್ಯ. ಪ್ರಸಕ್ತ ವರುಷದಲ್ಲಿ ಅಂದರೆ ೧೯೭೩–
೭೪ರಲ್ಲಿ ದೇಶಕ್ಕೆ ಬೇಕಾಗುವ ಔದ್ಯೋಗಿಕ ಮರಮುಟ್ಟುಗಳ
ಅವಶ್ಯಕತೆ ೧೭೦ ಕೋಟಿ ಕ್ಯೂಬಿಕ್ ಮೀಟರುಗಳು. ೧೯೮೦
ಹಾಗೂ ೧೯೯೦ರ ದಶಕದಲ್ಲಿ ಔದ್ಯೋಗಿಕ ಮರಮುಟ್ಟುಗಳ
ಬೇಡಿಕೆ ಕ್ರಮವಾಗಿ ೨.೩, ೪.೧ ಕೋಟಿ ಕ್ಯೂಬಿಕ್ ಮೀಟರು
ಗಳು ಹಾಗೂ ಉರುವಲು ಕಟ್ಟಿಗೆ ೨೫ ಹಾಗೂ ೩೦ ಕೋಟಿ

ಕ್ಯೂಬಿಕ್ ಮೀಟರುಗಳಷ್ಟು ಹೆಚ್ಚಾಗಬಹುದೆಂದು ತಜ್ಞರು ಲೆಕ್ಕ ಹಾಕಿದ್ದಾರೆ. ಪ್ರತಿವರುಷ ನಾವು ನಿರ್ಯಾತ ಮಾಡುವ ವನ್ಯೋತ್ಪತ್ತಿಗಳ ಸರಾಸರಿ ಮೌಲ್ಯ ೨೭.೬ ಕೋಟಿ ರೂಪಾಯಿಗಳು, ಆಯಾತ ಮೌಲ್ಯ ೩೯ ಕೋಟಿ ರೂಪಾಯಿಗಳು. ಮೇಲ್ಕಾಣಿಸಿದ ಅಂಕಿ–ಸಂಖ್ಯೆಗಳು ದೇಶದಲ್ಲಿ ಅರಣ್ಯಾಭಿವೃದ್ಧಿಯ ತೀವ್ರ ಅವಶ್ಯಕತೆಯನ್ನು ಸ್ಫುಟಗೊಳಿಸುತ್ತವೆ. ನ್ಯೂಝಿಲಂಡದಂತಹ ಸಣ್ಣ ನಡುಗಡ್ಡೆ, ಫಿನಲೆಂಡ್, ಫಿಲಿಪಾಯಿನ್ಸಗಳಂತಹ ಪುಟ್ಟ ರಾಷ್ಟ್ರಗಳೂ ಅರಣ್ಯವನ್ನು ಶಾಸ್ತ್ರೋಕ್ತವಾಗಿ ಬೆಳೆಸಿ ವನ್ಯೋತ್ಪತ್ತಿಗಳನ್ನು ನಿರ್ಯಾತ ಮಾಡಿ ಕೈತುಂಬ ಸಂಪಾದಿಸುತ್ತಿರುವಾಗ ವಿಪಿನ ಪ್ರದೇಶ ಹಾಗೂ ಅಗ್ಗದ ಜನಬಲವಿರುವ ನಮ್ಮಲ್ಲಿ ಜನತೆ ಹಾಗೂ ಸರಕಾರದ ಸಮನ್ವಯ ಸಹಕಾರದಿಂದ ಕೃಷಿಯಷ್ಟೆ ಅರಣ್ಯ ಸಂಪತ್ತಿಯನ್ನು ಬೆಳೆಸಿಕೊಳ್ಳಲು ಸಾಧ್ಯವಿದೆ. ಉದ್ದಿಮೆಗಳ ಉದ್ಯಾನ ನಾಡಾದ ಪಶ್ಚಿಮ ಜರ್ಮನಿಯಲ್ಲಿ ಒಂದಂಗುಲ ಜಾಗ ಸಹ ಹಾಳು ಮಾಡದೆ ನಂದನವನಗಳನ್ನು ನಿರ್ಮಿಸಲಾಗಿದೆ. ಅಮೇರಿಕದಲ್ಲಿ ರಾಷ್ಟ್ರದ ಮರದ ದಿಮ್ಮಿಗಳು, ವನ್ಯ ಪ್ರಾಣಿಗಳು ಮತ್ತು ಇತರ ವನ್ಯಸಂಪತ್ತು ಇವುಗಳ ಜಾಣ್ಮೆಯ ಉಪಯೋಗದಿಂದ ಪ್ರತಿಯೊಬ್ಬರೂ ಪ್ರಯೋಜನ ಪಡೆಯುವಂತೆ ೧೮ ದಶಲಕ್ಷಕ್ಕಿಂತಲೂ ಹೆಚ್ಚು ಎಕರೆ ಅರಣ್ಯಪ್ರದೇಶಗಳ ಆಡಳಿತ ರಾಷ್ಟ್ರೀಯ ಅರಣ್ಯಗಳಾಗಿ ಸಾಗುತ್ತಿದೆ. ಪಾಶ್ಚಾತ್ಯರ ಸಾಮಾಜಿಕ ಪದ್ಧತಿ, ವಿಚಾರಸರಣಿ, ವೇಷಭೂಷಣಗಳನ್ನು ಅನುಕರಿಸುತ್ತಿರುವ ನಾವು ಅವರ ನಿಸರ್ಗಪ್ರಿಯತೆ ಹಾಗೂ

ವನಶ್ರೀ ವರ್ಧನೆಯ ಬಗ್ಗೆ ಅವರಿಗಿರುವ ಶ್ರದ್ಧೆಯನ್ನೇಕೆ ಅನುಸರಿಸಬಾರದೆಂಬುದು ಅಂತರ್ಮನನ ಮಾಡಬೇಕಾದ ಪ್ರಶ್ನೆ.

೩) ಅರಣ್ಯಗಳ ಒಳ ಪ್ರದೇಶಗಳನ್ನು ತಲುಪಲು ಸಂಚಾರಮಾರ್ಗಗಳ ಅಭಾವ ನಮ್ಮ ದೇಶದಲ್ಲಿ ಸಾಕಷ್ಟಿದೆ. ಹೀಗಾಗಿ ಅರಣ್ಯೋತ್ಪತ್ತಿಗಳ ಸಾಗಾಟ ಒಂದು ದೊಡ್ಡ ಸಮಸ್ಯೆಯಾಗಿದೆ. ಆನೆ, ನದಿ ಹಾಗೂ ಲಾರಿಗಳನ್ನು ಸಾಗಾಟದ ಸಾಧನಗಳನ್ನಾಗಿ ಬಳಸಿಕೊಳ್ಳುತ್ತಿದ್ದಾಗ್ಯೂ ಸಾಕಷ್ಟು ಅರಣ್ಯರಸ್ತೆ ಸೌಕರ್ಯಗಳಿಲ್ಲದಿರುವದರಿಂದ ಅನೇಕ ಅರಣ್ಯಗಳಲ್ಲಿ ಮರಗಳು ಬೆಳೆದು ಮುದಿಯಾಗಿ ಕ್ರಿಮಿ-ಕೀಟಕಗಳಿಗೆ ಆಹಾರವಾಗಿ ಅಂತ್ಯ ಕಾಣುವವು. ಹೀಗೆ ವೃಕ್ಷ ಸಂಪತ್ತು ಅಪವ್ಯಯವಾಗದಂತೆ ಅವಶ್ಯಕ ಅರಣ್ಯಮಾರ್ಗಗಳನ್ನು ಹೆಚ್ಚಿಸಲು ಸರಕಾರ ಹಿಂದುಳಿಯಬಾರದು. ಪ್ರತಿ ಚದರು ಮೈಲು ಅರಣ್ಯಕ್ಕೆ ೨ ಮೈಲುಗಳಷ್ಟು ರಸ್ತೆಯಿರಬೇಕೆಂದು ಆಧುನಿಕ ವನ್ಯಾಡಳಿತ ನಿರ್ಧರಿಸಿದೆ.

೪) ಅರಣ್ಯ ದೇಶದ ಅಮೂಲ್ಯ ಸಂಪತ್ತು. ಅದರ ರಕ್ಷಣೆ ಅಗತ್ಯವೆಂಬ ನಾಗರಿಕ ಪ್ರಜ್ಞೆಯ ಅರಿವನ್ನು ಚಿತ್ರಪತ್ರ, ಸಂಕೀರ್ಣಪತ್ರಿಕೆ, ಆಕಾಶವಾಣಿ, ಸಿನೇಮಾ ಸ್ಲೈಡ್ಸ್, ವೇದಿಕೆ ಮುಂತಾದ ಸಾರ್ವಜನಿಕ ಪ್ರಸಾರ ಮಾಧ್ಯಮಗಳ ದ್ವಾರಾ ಜನರಲ್ಲಿ ಬಿಂಬಿಸುವ ಕ್ರಮ ಅಧಿಕವಾಗಬೇಕು. ನಮ್ಮ ಅರಣ್ಯಗಳ ಸ್ವರೂಪ ಹಾಗೂ ವೈಶಾಲ್ಯವನ್ನು ಸಾದ್ಯಂತವಾಗಿ ಅಭ್ಯಸಿಸಿ ಅಲ್ಲಿ ಕಾಣುವ ವೃಕ್ಷಗಳು, ಆ ವೃಕ್ಷಗಳ ಜೀವನ

ಗೆಯ ಸ್ವರೂಪ, ಅವುಗಳ ಆರ್ಥಿಕ ಪ್ರಯೋಜನ, ಅವುಗಳಿಗೆ ತಗಲುವ ರೋಗರುಜಿನಗಳು, ಅವುಗಳ ಹತೋಟಿ ಕ್ರಮಗಳು, ಗಿಡಮೂಲಿಕೆಗಳು, ಅವುಗಳನ್ನು ಗುರುತಿಸುವ ಕ್ರಮ, ವನ್ಯಮೃಗ ಸಂರಕ್ಷಣೆ, ಅರಣ್ಯ ಸಂರಕ್ಷಣಾ ವಿಧಾನಗಳು ಇವೇ ಮುಂತಾದ ವಿಷಯಗಳ ಕುರಿತಾಗಿರುವ ಪುಸ್ತಿಕೆಗಳನ್ನು ಸರಕಾರ ನಮ್ಮ ಅರಣ್ಯಶಾಸ್ತ್ರಜ್ಞರಿಂದ ಬರೆಯಿಸಿ, ಪ್ರಕಟಿಸಿ ಅವು ಆಯಾ ಪ್ರಾಂತೀಯ ಭಾಷೆಗಳಲ್ಲೂ ಸುಲಭ ಬೆಲೆಗೆ ಪೇಟೆಗಳಲ್ಲಿ ಲಭ್ಯವಾಗುವಂತಾಗಬೇಕು. ಭಾರತದ ಪ್ರಥಮ ರಾಷ್ಟ್ರಾಧ್ಯಕ್ಷರಾಗಿದ್ದ ಡಾ|| ರಾಜೇಂದ್ರ ಪ್ರಸಾದರವರು ಈ ರೀತಿ ಹೇಳಿದ್ದರು : " There is a good case for producing readable literature to enlighten the common people about India's forest wealth and its importance ".

೫) ಅರಣ್ಯಗಳ ಬಗ್ಗೆ ಪ್ರಾಯೋಗಿಕ ಶಿಕ್ಷಣಕೊಡುವ ಕೇಂದ್ರಗಳ ಸಂಖ್ಯೆ ಹೆಚ್ಚಬೇಕು. ಕ್ರಮಬದ್ಧವಾದ ಸಾರ್ವಜನಿಕ ಸಂಪರ್ಕ ವ್ಯವಸ್ಥೆಯನ್ನು ಅರಣ್ಯ ಇಲಾಖೆ ಹೊಂದಿರಬೇಕು. ಪ್ರತಿಯೊಂದು ಭೌಗೋಲಿಕ ಪರಿಸರಕ್ಕನುಗುಣವಾಗಿ ಕಾಡಿನ ವಿಧಕ್ಕೆ ಹೊಂದಿ ಬೇರೆ ಬೇರೆ ಅರಣ್ಯ ಸಂಶೋಧನಾ ಕೇಂದ್ರಗಳಿರುವದೂ ಅವಶ್ಯ. ಬೆಂಗಳೂರಿನ ಸಂಶೋಧನೆ ಕೊಯಿಮತ್ತೂರಿಗೆ ಅನ್ವಯಿಸುವದಿಲ್ಲ. ಕೊಯಿಮತ್ತೂರಿನದು ಕೊಡಗಿಗೆ ಅನ್ವಯಿಸುವದಿಲ್ಲ. ಅರಣ್ಯ ಸಂಶೋಧನೆಯನ್ನು ಪ್ರಾದೇಶಿಕ ಮಟ್ಟದಲ್ಲಿ ತೀವ್ರಗೊಳಿಸುವದು ಅವಶ್ಯ. ಇಲ್ಲವಾದಲ್ಲಿ ಅರಣ್ಯಸಂಶೋಧನೆ ಲಾಭದಾಯಕವಾಗಲಾರದು.

ಉತ್ತರ ಕನ್ನಡ ಜಿಲ್ಲೆಯ ವನೋತ್ಪತ್ತಿಯಿಂದ ರಾಜ್ಯ ಸರಕಾರಕ್ಕೆ ಪ್ರತಿ ವರುಷ ಸರಾಸರಿ ೫ ಕೋಟಿ ರೂಪಾಯಿಗಳ ಆದಾಯವಿದೆ. ಆದರೆ ಅರಣ್ಯ ಸಂಶೋಧನೆಗೆ, ಅದಕ್ಕೆ ಬೇಕಾದ ಸಿಬ್ಬಂದಿಗೆ, ವನೋತ್ಪತ್ತಿಗಳಿಂದ ಸಂಯೋಜನೆಗೊಳ್ಳಬಹುದಾದ ಸ್ವಂತ ಉದ್ದಿಮೆಗಳಿಗೆ ತರಬೇತಿ, ಮಾರ್ಗದರ್ಶನ ನೀಡುವ ಯಾವ ವ್ಯವಸ್ಥೆಯೂ ಇಲ್ಲದಿರುವದು ವಿಷಾದಕರ.

೬) ನಮ್ಮ ಅರಣ್ಯಗಳು ವಿಸ್ತೀರ್ಣ ದೃಷ್ಟಿಯಿಂದ ಮಾತ್ರವಲ್ಲದೆ ಉಪಯೋಗದ ದೃಷ್ಟಿಯಿಂದಲೂ ಹಲವು ಕೊರತೆಗಳಿಂದ ಕೂಡಿವೆ. ನಮ್ಮ ಅರಣ್ಯಗಳಲ್ಲಿ ಶೇಕಡಾ ೫೫ ರಷ್ಟು ಮಾತ್ರ ಉತ್ಪಾದನಾ ದೃಷ್ಟಿಯಿಂದ ಪ್ರಾಮುಖ್ಯವನ್ನು ಹೊಂದಿದ್ದು ಉಳಿದ ಶೇಕಡಾ ೪೫ ರಷ್ಟು ಹೆಸರಿಗೆ ಮಾತ್ರ ಕಾಡುಗಳೆನಿಸಿಕೊಂಡು ಕುರುಚಲು ಗಿಡಗಳಿಂದ ಕೂಡಿವೆ. ಇಂಥ ಪ್ರದೇಶಗಳಲ್ಲಿ ಆ ಆ ಪ್ರದೇಶಗಳ ಭೂ, ಹವಾಗುಣಕ್ಕೆ ಒಗ್ಗುವಂತಹ ಔದ್ಯಮಿಕ ಮರಮುಟ್ಟುಗಳನ್ನು ವಿಜ್ಞಾನಿಗಳ ಸಹಾಯದಿಂದ ಶಾಸ್ತ್ರೋಕ್ತವಾಗಿ ಬೆಳೆಸಿದರೆ ಲಾಭದ ಜೊತೆಗೆ ಅನೇಕ ನಿರುದ್ಯೋಗಿಗಳಿಗೂ ಅನ್ನ ಕೊಟ್ಟಂತಾಗುವದು. ಸಮೃದ್ಧ ಮಳೆ ಬೀಳುವಲ್ಲಿ, ನೈಸರ್ಗಿಕ, ಅರಣ್ಯಗಳಲ್ಲಿ ಉಪಯುಕ್ತ ವೃಕ್ಷಗಳಿಗಿಂತ ಬೇಡವಾದ ವೃಕ್ಷಗಳೇ ಹೆಚ್ಚಿರುವಂತೆ ಕಂಡುಬರುತ್ತದೆ. ಇದರಿಂದಾಗಿ ತಲಾ ಲಾಭ ತೀರ ಕಡಿಮೆಯಾಗಿದೆ. ಬೇಡವಾದ ಹಾಗೂ ಶಕ್ತಿ

ೀನ ಮರಗಳನ್ನು ಕಡಿದು ಆ ಸ್ಥಳದಲ್ಲಿ ಹೊಸ ಉಪಯುಕ್ತ ಗಳನ್ನು ಊರಬೇಕು. ಎಲ್ಲ ಗಿಡಗಳನ್ನೂ ಏಕಕಾಲಕ್ಕೆ ರಿ ಒಮ್ಮೆಲೆ ಧ್ವಂಸ ಮಾಡುವದಕ್ಕಿಂತ ಪ್ರತಿವರುಷವೂ ಲವು ಮರಗಳು ಬಲಿಯುವಂತೆ ನೆಟ್ಟರೆ ಕೃಷಿಯಷ್ಟೆ ರಣ್ಯವೂ ಫಲದಾಯಕವಾಗಬಲ್ಲದು.

೭) ದೇಶದ ಕಾಗದ ಕಾರ್ಖಾನೆಗಳನ್ನು ಕುರಿತು ಒಂದೆ ದು ಮಾತು ಹೇಳಬೇಕು. ಈಗ ಭಾರತದಲ್ಲಿ ೫೯ ಕಾಗದದ ಕಾರ್ಖಾನೆಗಳಿವೆ. ಪತ್ರಿಕಾ ಕಾಗದ, ಅಂಚೆ ಚೀಟಿಗಳ ಕಾಗದ, ಮತ್ತು ಕರೆನ್ಸಿ ನೋಟುಗಳ ಕಾಗದಗಳ ಅಭಾವ ನಮ್ಮ ದೇಶ ದಲ್ಲಿ ತೀವ್ರವಾಗಿದೆ. ಅಮೇರಿಕ, ಕೆನಡಾ, ಸೋವಿಯತ್ ದೇಶ, ಹಾಲಂಡ್, ಝೆಕೊಸ್ಲೊವಾಕಿಯಾ ಹಾಗೂ ಸ್ಕ್ಯಾಂಡಿನೇವಿ ಯನ್ ದೇಶಗಳಿಂದ ಭಾರತ ಇವನ್ನು ಪಡೆಯುತ್ತಲಿದೆ. ಭಾರತದ ಕಾಗದದ ಕೈಗಾರಿಕೆ ತನ್ನ ಅಭಿವೃದ್ಧಿಯಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಲಿದೆ. ಪ್ರಮುಖ ಸಮಸ್ಯೆ ಯೆಂದರೆ ಕಚ್ಚಾ ಸರಕುಗಳ ಕೊರತೆ. ಮುಖ್ಯವಾಗಿ ಈ ಕೈಗಾ ರಿಕೆ ಬಿದಿರನ್ನೇ ಅವಲಂಬಿಸಿದೆ. ಭಾರತದಲ್ಲಿ ೨೦ ಲಕ್ಷ ಟನ್ನು ಗಳಷ್ಟು ಬಿದಿರು ಬೆಳೆದರೂ ಕೇವಲ ೧೪ ಲಕ್ಷ ಟನ್ನುಗಳಷ್ಟು ಮಾತ್ರ ಕಾಗದದ ಕೈಗಾರಿಕೆಗೆ ದೊರೆಯುತ್ತದೆ. ಹೀಗಾಗಿ ಕಚ್ಚಾ ಸಾಮಗ್ರಿಯ ಕೊರತೆ ತೀವ್ರವಾಗಿದೆ. ಬಿದಿರಿನ ಎಕರೆ ವಾರ ಉತ್ಪನ್ನ ಭಾರತದಲ್ಲಿ ಕಡಿಮೆ— ಒಂದು ಎಕರೆಗೆ ಒಂದು ಟನ್ ಮಾತ್ರ. ಜಪಾನಿನಲ್ಲಿ ಎಕರೆಗೆ ೪ ಟನ್ ಇದೆ. ನಾವು ನಮ್ಮ ಬಿದಿರಿನ ಉತ್ಪನ್ನವನ್ನು ಹೆಚ್ಚಿಸಬೇಕಾಗಿದೆ. ಬಿದಿರಿನ

ಕೃಷಿ ಅನುಕೂಲವಿರುವಲ್ಲೆಲ್ಲ ವಿಸ್ತೃತವಾಗಿ ಸಾಗಬೇಕಾಗಿದ
ಕಚ್ಚಾ ಸಾಮಗ್ರಿಯ ಅಪವ್ಯಯವನ್ನು ಶೀಘ್ರವಾಗಿ ತಡೆಗಟ್ಟ
ಬೇಕು. ಬಿದಿರಿನ ಬೆಳವಣಿಗೆಗೆ ಯೋಗ್ಯ ಅವಕಾಶ ನಿರ್ಮಿ
ದೀರ್ಘಕಾಲಕ್ಕಾಗಿ ಒಂದು ನೀತಿಯನ್ನು ರೂಪಿಸುವದು ಅವಶ್ಯ

೮) ಭೂಸವಕಳಿಯನ್ನು ತಡೆಯುವದಕ್ಕೆ, ವೃ
ಭೂಮಿಯನ್ನು ಹೆಚ್ಚಿಸುವದಕ್ಕೆ ಮತ್ತು ಗ್ರಾಮಗಳ ಸುತ್ತ
ವಲಯದಲ್ಲಿ ಗಿಡ ನೆಡುವದಕ್ಕೆ ಸಾಕಷ್ಟು ಆಸ್ಪದವಿದೆ. ವ
ಮಹೋತ್ಸವದ ಪ್ರಸಂಗಗಳ ಮುಖೇನ ಗಿಡ ನೆಡುವ ಕಾರ್ಯ
ವನ್ನು ಸ್ಥಾನಿಕ ಸಂಸ್ಥೆಗಳ ಮತ್ತು ಸಾರ್ವಜನಿಕರ ಸರ್ವತೋ
ಮುಖ ಸಹಕಾರದಿಂದ ಮುಂದುವರಿಸಬೇಕು. ಇದರಿಂ
ಉರುವಲದ ಕೊರತೆ ಎಷ್ಟೋ ದೂರವಾಗುವದು. ಉರು
ವಲದ ಕೊರತೆ ಕಡಿಮೆಯಾದಂತೆಲ್ಲ ಹಳ್ಳಿಗಳಲ್ಲಿಯ ಸಗಣಿಯ
ಉರುವಲಕ್ಕೆ ಉಪಯೋಗವಾಗದೆ ಗೊಬ್ಬರಕ್ಕೆಂದು ದೊ
ಯುತ್ತ ಹೋಗುವದು.

೯) ಪಾಶ್ಚಾತ್ಯ ದೇಶಗಳಲ್ಲಿ ಕೃಷಿಯಷ್ಟೇ ಪರಿಶ್ರಮ
ದಿಂದ ಅರಣ್ಯಗಳನ್ನು ಬೆಳೆಸಿದ್ದಾರೆ. ಇಂದು ನಮ್ಮ ದೇಶದ
ವಸತಿಗಾಗಿ, ಶೇತಕಿಗಾಗಿ ಅರಣ್ಯಪ್ರದೇಶ ಬಿಡುಗಡೆ ಮಾಡುವ
ಕೆಲಸ ಅಲ್ಲಲ್ಲಿ ನಡೆದಿದೆ. ವ್ಯವಸಾಯದ ಹೆಸರಿನಲ್ಲಿ ಜ
ವಿದ್ಯುತ್ ಯೋಜನೆಗಳಿಗಾಗಿ ಇಂದು ದಿನದಿನವೂ ನೂರಾರು
ಎಕರೆಗಳಷ್ಟು ಅರಣ್ಯ ಪ್ರದೇಶಗಳನ್ನು ನಾಶಗೊಳಿಸಲಾಗ
ತ್ತಿದೆ. ಕಣಿವೆಗಳನ್ನು ಜಲಮಯಮಾಡಿ ಫಲವತ್ತಾ

ಮೈದಾನ ಪ್ರದೇಶಕ್ಕೆಲ್ಲ ನೇಗಲಿಡತೊಡಗಿದರೆ ತಾತ್ಕಾಲಿಕ ಲಾಭ ದೊರೆತರೂ ವಿಪಿನ ಪ್ರದೇಶ ಮೊಟಕಾಗುತ್ತ ಬಂದು, ಪ್ರಕೃತಿಯ ವಿಕ್ರಮ ಪ್ರಕೋಪ, ವಾತಾವರಣ ಮಾಲಿನ್ಯತೆ, ಹವಾಮಾನ ವೈಪರೀತ್ಯ, ಸೃಷ್ಟಿರಾಶಿಯ ಅಸಮತೋಲ ಮುಂತಾದವುಗಳಿಗೆ ಹೆಚ್ಚಿನ ಆಸ್ಪದ ಕೊಟ್ಟಂತಾಗುವದು. ಆಹಾರೋತ್ಪಾದನೆ ಹೆಚ್ಚಿಸಲು, ಜನರ ಭೂದಾಹ ನೀಗಿಸಲು ನೂರಾರು ವರುಷಗಳ ಅಮೂಲ್ಯ ವನ್ಯಸಂಪತ್ತನ್ನು ಬಿಡುಗಡೆ ಮಾಡುವದು ದೀರ್ಘಕಾಲದ ಸದುಪಯೋಗದ ದೃಷ್ಟಿಯಿಂದ ಸಮನ್ವಯ ದೃಷ್ಟಿಕೋನದಿಂದ ಶಾಸ್ತ್ರೀಯವಲ್ಲ. ಇದಲ್ಲದೆ ಹೆಚ್ಚು ಆಹಾರ ಬೆಳೆಸಲು ಅರಣ್ಯಗಳ ಉಚ್ಚಾಟನೆ ಆಗಬೇಕಾಗಿಲ್ಲ. ಮಾರಿಯ ಕಣ್ಣು ಹೋತದ ಮೇಲೆ ಎಂಬಂತೆ ಬಲಿಷ್ಠ ರಾಜಕೀಯ ಶಕ್ತಿಗಳ ವಕ್ರದೃಷ್ಟಿ ಅರಣ್ಯಗಳ ಮೇಲೆಯೇ ಇದೆ. ಸುಧಾರಿತ ರೈತಾಪಿ ಉಪಕರಣಗಳು, ಕೃತಕ ಗೊಬ್ಬರ ಮುಂತಾದವುಗಳನ್ನು ಬಳಸಿ ಭೂಮಿಯ ಫಲವಂತಿಕೆಯನ್ನು ಹೆಚ್ಚಿಸಿಕೊಂಡು ಒಳ್ಳೆಯ ತಳಿಯ ಶಕ್ತಿಮಾನ್ ಬೀಜಗಳನ್ನು ಬಿತ್ತಿ, ವೈಜ್ಞಾನಿಕ ರೀತಿಯಲ್ಲಿ ಕೃಷಿ ಉದ್ಯಮದ ನಿರ್ವಹಣೆ ಯಾದರೆ ನಮ್ಮ ಕ್ಷೇತ್ರಕೆ ಉತ್ಪನ್ನ ೪ ಪಟ್ಟು ಹೆಚ್ಚುವದರಲ್ಲಿ ಯಾವ ಸಂದೇಹವೂ ಇಲ್ಲ. ಉದಾಸೀನ ಅರಣ್ಯಧೋರಣೆ ಕೊನೆಗೊಂಡು ಕ್ರಿಯಾತ್ಮಕ ಮತ್ತು ದೃಢವಾದ ಅರಣ್ಯಸಂರಕ್ಷಣಾ ಕಾರ್ಯ ಮತ್ತು ಅಭಿವೃದ್ಧಿ ತೀವ್ರವಾಗಿ ಮುಂದುವರಿಯಬೇಕು. ಇದರಿಂದ ಒಂದು ಅಮೂಲ್ಯ ಸಾಧನ--ಸಂಪತ್ತನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸುವಂತೆ ಆಗುತ್ತದೆ.

ಅರಣ್ಯ ಸಂಪತ್ತನ್ನು ವೃದ್ಧಿಗೊಳಿಸುವದು ಬಹು ಪುಣ್ಯ
ಕೆಲಸ. ಈ ದಿಶೆಯಲ್ಲಿ ಅರಣ್ಯ ಇಲಾಖೆಯ ಸಿಬ್ಬಂದಿಯವ
ಶ್ರದ್ಧಾಪೂರ್ಣ 'ಮೆಹನತ್' ಅವಶ್ಯ ಎಂಬುದು ಬೆಳಕಿನ
ಸುಸ್ಪಷ್ಟ.

ದಶಕೂಪ ಸಮೋಽವಾಪಿ ದಶವಾಪಿ ಸಮೋಽಹ್ರದಃ
ದಶಹ್ರತ್ ಸಮೋ ಪುತ್ರಃ ದಶಪುತ್ರ ಸಮುಸ್ತ್ರುಃ ॥

ಹತ್ತು ಬಾವಿಗಳು ಒಂದು ಕೊಳಕ್ಕೆ ಸಮ. ಹತ್ತು ಕೊಳಗ
ಒಂದು ಕೆರೆಗೆ ಸಮ. ಒಂದು ಮಗನನ್ನು ಪಡೆದವನು ಹ
ಕೆರೆಗಳನ್ನು ನಿರ್ಮಿಸಿದಷ್ಟು ಪುಣ್ಯ ಪಡೆದರೆ ಹೆಚ್ಚಿನ ಶ್ರ
ವಿಲ್ಲದ ಖರ್ಚಿಲ್ಲದ ಒಂದು ಮರವನ್ನು ಬೆಳೆಸಿದರೆ ಹತ್ತು ಬ
ಮಕ್ಕಳನ್ನು ಪಡೆದ ಪುಣ್ಯ ಲಭಿಸುತ್ತದೆ.

ವನಶ್ರೀ ವರ್ಧನೆ ಆರ್ಥಿಕಾಭಿವೃದ್ಧಿಗೆ ಕ್ಷೇಮಕಾರಿ.

---

# ಪಾರಿಭಾಷಿಕ ಪದ ಕೋಶ

ಅಗಲ ಎಲೆಯ ಮರಗಳು—NOn-Coniferous
ಅತ್ತಿಮರ—Ficus glomerata
ಅರಗು—Lac
ಅರಳಿ—Ficus religiosa
ಅವರ್ಗೀಕೃತ ಅರಣ್ಯಗಳು—Unclassified forests
ಅಶ್ವತ್ಥ ಮರ—Ficus religiosa
ಆಲ—Ficus bengalcnsis
ಆಶ್ರಯಜೀವಿ—Commensal
ಕರ್ಪೂರ—Ehretia laevis
ಕಾಚಿನ ಮರ—Acacia catechu
ಕಾಡುಕೋಣ—Bison
ಕಾಡುಕೋಳಿ—Woodcock
ಕಾದಿಟ್ಟ ಅರಣ್ಯಗಳು—Reserved forests
ಕೇಸರಿಕೆ ಮರ—Casuarina equisetifolia
ಕೊಕ್ಕರೆ (ಬಲಾಕ)—Crane
ಕೊಡಸೀಗ—Holarrhena antidysenterica
ಕೋಗಿಲೆ (ಅನ್ಯಭೃತ)—Cuckoo
ಕ್ರೌಂಚ—Curlew

ಗೇರುಬೀಜ—Anacardium occidentale
ಗಿಳಿ—Parrot
ಗುಬ್ಬಚ್ಚಿ—Sparrow
ಗೂಬೆ—Owl
ಗೌಜಲಹಕ್ಕಿ—Poutridges
ಗಂಧದಮರ—Santalum album
ಘೇಂಡಾಮೃಗ—Rhinoceros
ಚಕ್ರವಾಕ (ಅಮಳ್ವಕ್ಕಿ)—Mallard
ಚಿರತೆ—Leopard
ಜಿಂಕೆ—gazelle
ತೇಗು—Tectonagrandis
ಧೂಪ—Vateria indica
ನವಿಲು (ಉರಗಭೋಜಿ)—Peacock
ನೀಲಗಿರಿ—Eucalyptus
ನಂಜಿನಕೊರಡು—Strychnos nux-Vomica
ನಂದಿಮರ—Lagerstroemia lanceolata
ಪಾರಿವಾಳ—Dock
ಬಕ—Heron
ಬಲ್ಲಗಿ—Poeciloneuron indicum
ಬಾತುಕೋಳಿ—Duck
ಬಿದಿರು—Bamboo

ಬಿಲ್ವವೃಕ್ಷ—Aegle Marmelos
ಬೀಟೆಮರ—Dalbergia latifolia
ಬೂರಗ—Bombax ceiba
ಬೇವಿನಮರ—Azadirachta indica
ಭಾರದ್ವಾಜ (ಚರಂಡಲು ಪಕ್ಷಿ)—Lark
ಮತ್ತಿಮರ—Terminalia tomentosa
ಮರಕುಟುಕ—Woodpecker
ಮಿದುಮರ—Coniferous
ಮೀನ್‌ಚುಳ್ಳಿ—Kingfisher
ರಕ್ಷಿತ ಅರಣ್ಯಗಳು—Protected forests
ರಾಜಹಂಸ—Flamingo
ರಾಳ—Rosin
ಶಿಲೀಂಧ್ರ—Fungus
ಸುರಹೊನ್ನೆ—Calophyllum inophyllum
ಹದ್ದು—Hawk
ಹಾಲೆ—Wrightia tinctoria
ಹೊನ್ನೆಮರ—Pterocarpus marsupium
ಹಂಸ—Swan

# ಗ್ರಂಥಋಣ


1) Bore, N. L. : 1953 Manual of Indian Forest Botany, London

2) Chatterjee N. N : Forests in our Economy, Yojana Vol. XVII. No. 11.

3) Khader Hussain : 1966 The Need of Forests and Nature Resources. My Forest. Vol. III. No. 3

4) ಕೃಷ್ಣರಾವ್, ಎಂ. ವಿ. : ಕೌಟಿಲ್ಯ.

5) Misra, K. N. and M. S Tomar : 1967. Role of Forestry in the Economic Development in India.

6) ರಾಜಗೋಪಾಲರಾವ್ ಎಸ್. : ೧೯೬೧. ಕಾಡು–ನಾಡು. ಬೀಡು ಸಮನ್ವಯಿತ ಸಿದ್ಧಾಂತ ಮತ್ತು ಇತರ ಪ್ರಬಂಧಗಳು.

7) Ramaswamy M. N. : 1964. A Short History of Mysore Forest Department. My Forest. Vol. 1. No. 1.

8) Sagreiya, K.P., Rao, V.S., Bhadran, C.A.R., Venkataswamy P.: 100 Years of Indian Forestry (1861-1961)

9) Saith & Riazada Waheed Khan: 1962. Trees for Vana-mahotsava.

10) Sastri, B. N.: 1948. The Wealth of India. Vol. I-VI. CSIR. New Delhi.

11) India, A Reference Annual, 1973. Publication Division, Ministry of Information and Broadcasting, Government of India

12) ಕನ್ನಡ ವಿಶ್ವಕೋಶ.

13) Encyclopaedia Britannica.

14) Fourth Five Year Plan 1969-74. Planning Commission, Govt. of India.

# ಉಪನ್ಯಾಸ ಗ್ರಂಥಮಾಲೆಯ ಇತ್ತೀಚಿನ ಪ್ರಕಟನೆಗಳು

ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ

ಹಿಂದೂ ವಿವಾಹ ಪದ್ಧತಿ —ಎಚ್. ಬಿ. ಮಾಳಿ
ಈಶ್ವರ ಮತ್ತು ಅನಿಷ್ಟ —ಎನ್. ಜಿ. ಮಹಾದೇವಪ್ಪ
ಮೂಲವ್ಯಾಧಿ —ಸ. ಜ. ನಾಗಲೋಟಿಮಠ
ಜಗದ್ವಿಖ್ಯಾತ ಭಾರತೀಯ ವಿಜ್ಞಾನಿಗಳು — ಗೋಪಾಲ ಆಶ್ರಿತ
ಕನ್ನಡರಾಜ್ಯರಮಾರಮಣ ಕೃಷ್ಣದೇವರಾಯ —ಡಿ. ಟಿ. ಜೋಶಿ
ಸ್ತ್ರೀ ನಡೆದು ಬಂದ ದಾರಿ —ಸರೋಜಿನಿ ಬಿ. ಶಿಂತ್ರಿ
ಸರೋಜಿನಿ ನಾಯ್ಡು —ಎಲ್. ಸಿ. ಪಾಟೀಲ
ಹಳ್ಳಿಗಳ ಆರ್ಥಿಕ ಅಭಿವೃದ್ಧಿ —ಎಸ್. ಜಿ. ಕುಲಕರ್ಣಿ
ಯೋಜನೆಗಳಿಂದ ಕಲಿತ ಪಾಠಗಳು —ಡಿ. ವೆಂಕಟರಾವ
ಭಾರತದ ವಾಣಿಜ್ಯಾಭಿವೃದ್ಧಿ —ಸಿ. ಎಂ. ಕೊಟ್ರೂರಸೆಟ್ಟಿ
ಕಥನಕುಶಲಕವಿ ಲಕ್ಷ್ಮೀಶ —ವ್ಹಿ. ಡಿ. ಬೇಂದ್ರೆ
ಮಾತು —ಜಿ. ಕೃಷ್ಣರಾವ
ಶಿಕ್ಷಣವೇತ್ತ ಡಾ॥ ಜಾನ್ ಡ್ಯೂಯಿ —ಟಿ. ಕೆ. ಹಿರೇಗಂಗೆ

---

ವ್ಯಾಸಂಗವಿಸ್ತರಣ ಮತ್ತು ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩